



# ಚಂದಮಾಮ

ಸಂಸ್ಥಾಪಕರು : **ನಾಗಿರೆಡ್ಡಿ**

ಸಂಚಾಲಕರು : **'ಚಕ್ರಪಾಣಿ'**

---

ಹಿಂದಿನ ಸಂಚಿಕೆಯಲ್ಲಿ 'ಶಿಲಾರಥ' ಧಾರಾವಾಹಿ ಮುಗಿದುದರಿಂದ, ಈ ಸಂಚಿಕೆಯಲ್ಲಿ 'ಯಕ್ಷಪರ್ವತ'ವೆಂಬ ಹೊಸ ಧಾರಾವಾಹಿ ಪ್ರಾರಂಭವಾಗಿದೆ. ''ಶಿಲಾರಥ'ದ ವ್ಯಕ್ತಿಗಳು ಕೆಲವರು ಈ ಧಾರಾವಾಹಿಯಲ್ಲಿದ್ದರೂ ಇದು ಅದಕ್ಕಿಂತ ಭಿನ್ನವಾದ ಹೊಚ್ಚ ಹೊಸ ಕಥೆಯೇ. ಇನ್ನೊಂದು ವಿಶೇಷವೇನೆಂದರೆ, ಚಂದಮಾಮ ಸಂಸ್ಥೆ ಸ್ಥಾಪನೆಯಾಗಿ ಇಪ್ಪತ್ತೈದು ವರ್ಷಗಳು ತುಂಬಿದುದರ ಸ್ಮರಣಾರ್ಥವಾಗಿ ಮುಂದಿನ ಅಂದರೆ ಜೂಲೈ ತಿಂಗಳ ಸಂಚಿಕೆ, "ರಜತೋತ್ಸವ ಸಂಚಿಕೆ"ಯಾಗಿ ಹೊರಬೀಳುತ್ತದೆಂದು ತಿಳಿಸಲು ಸಂತೋಷ ಪಡುತ್ತೇವೆ.

---

ಸಂಪುಟ: ೪೮] ಜೂನ್ '೭೨ [ಸಂಚಿಕೆ ೬






ದುಷ್ಟಾ ಭಾರ್ಯಾ ಶಠೋ ಮಿತ್ರಂ
ಭೃತ್ಯೋಽಹಂಕಾರ ಸಂಯುತಃ
ಸಸರ್ಪೇಚ ಗೃಹೇ ವಾಸೋ
ಮೃತ್ಯುರೇವ ನ ಸಂಶಯಃ ೧.

ಕೆಟ್ಟ ಹೆಂಡತಿ, ಹಟಗಾರ ಮಿತ್ರ, ಅಹಂಕಾರಿ ಸೇವಕ, ಹಾವು ತಿರುಗಾಡುವ ಮನೆ ಇವೆಲ್ಲಾ ಪ್ರಾಣಾಂತಕವೆನ್ನಲು ಸಂದೇಹ ಬೇಡ.

ಯಸ್ಮಿನ್ ದೇಶೇ ನ ಸನ್ಮಾನೋ
ನ ಪ್ರೀತಿರ್ನ ಚ ಬಾಂಧವಾಃ
ನ ವಿದ್ಯಾ ನಾಸ್ತಿ ಧನಿಕೋ
ನ ತತ್ರ ದಿವಸಂ ವಸೇತ್ ೨.

ಯಾವ ದೇಶದಲ್ಲಿ ಸನ್ಮಾನವೂ, ಪ್ರೀತಿಯೂ, ಬಂಧುಗಳೂ, ವಿದ್ಯೆಯೂ, ಧನಿಕರೂ ಇಲ್ಲವೋ ಅಲ್ಲಿ ಒಂದು ದಿನವೂ ಇರಬಾರದು.

ಕುಚೇಲಿನಂ, ದಂತಮಲಾಪಹಾರಿಣಂ
ಬಹ್ವಾಶಿನಂ ನಿಷ್ಠುರವಾಕ್ಯ ಭಾಷಿಣಂ
ಸೂರ್ಯೋದಯೇ ಚಾಸ್ತಮಯೇ ಚ ಶಾಯಿನಂ
ವಿಮುಂಚತಿ ಶ್ರೀರಪಿ ಚಕ್ರಪಾಣಿನಂ ೩.

ಕೊಳೆ ಬಟ್ಟೆ ಧರಿಸುವವನೂ, ಹಲ್ಲು ತೊಳೆಯದವನೂ, ಅತಿಯಾಗಿ ತಿನ್ನುವವನೂ, ನಿಷ್ಠುರವಾಗಿ ಮಾತಾಡುವವನೂ, ಉದಯಕಾಲ ಸಾಯಂಕಾಲಗಳಲ್ಲಿ ನಿದ್ರಿಸುವವನೂ ವಿಷ್ಣುಮೂರ್ತಿ ಯಾದರೂ ಸರಿ, ಲಕ್ಷ್ಮಿ ಬಿಟ್ಟು ಹೋಗುತ್ತಾಳೆ.

ಕೂಡದಂಥವು




# ಮಾನವಸ್ವಭಾವ

**ಒಂ**ದು ಊರಿನಲ್ಲಿ ದಾನಪ್ಪನೆಂಬ ಬಡವನಾದ ರೈತನಿದ್ದ. ಅವನಿಗಿರುವ ಚಿಕ್ಕದೊಂದು ಹೊಲದಿಂದ ಬರುವ ಆದಾಯವು ಅವನ ಕುಟುಂಬದ ಹೊಟ್ಟೆ ತುಂಬಿಸಲಿಕ್ಕೂ ಸಾಲದಾಗಿತ್ತು. ಆದುದರಿಂದ ಅವನು ಎಷ್ಟೇ ಜಾಗರೂಕನಾಗಿದ್ದರೂ ಸಾಲಗಾರನಾಗಿಯೇಬಿಟ್ಟ. ಬಡ್ಡಿ ಕೂಡ ಕೊಡಲಾರದ ಪರಿಸ್ಥಿತಿಯಲ್ಲಿ ಸಾಲ ತೀರಿಸುವ ಬಗೆ ಹೇಗೆ? ಸಾಲದ ಮೊತ್ತ ಬೆಳೆಯುತ್ತಾ ಹೋಗುತ್ತಿತ್ತು.

"ಇದ್ದರೆ ತಿನ್ನೋಣ. ಇಲ್ಲದಿದ್ದರೆ ಉಪವಾಸ ಇರೋಣ. ಇರುವ ಹೊಲವನ್ನು ಮಾರಿ ಋಣ ಭಾರದಿಂದ ಮುಕ್ತರಾಗಲೇಬೇಕು" ಎಂದು ದಾನಪ್ಪನ ಹೆಂಡತಿ ಸಲಹೆ ಮಾಡಿದಳು.

ಅವಳ ಅಭಿಪ್ರಾಯದಂತೆ ದಾನಪ್ಪ ಹೊಲವನ್ನು ಮಾರಲಿಕ್ಕಿಟ್ಟನು. ಕಷ್ಟದಲ್ಲಿ ಸಿಕ್ಕಿಕೊಂಡು ಮಾರುವನೆಂದು ಗೊತ್ತಾಗಿ ಸಾಧ್ಯವಾದಷ್ಟು ಕಡಮೆ ಬೆಲೆಗೆ ಅದನ್ನು ಕೇಳುತ್ತಿದ್ದರು.

ಅದೇ ಊರಿನಲ್ಲಿ ಸೀನಪ್ಪನೆಂಬ ಮತ್ತೊಬ್ಬ ರೈತನಿದ್ದ. ದಾನಪ್ಪನ ತಂದೆ ತಾತಂದಿರು ಚೆನ್ನಾಗಿದ್ದ ಕಾಲದಲ್ಲಿ ಸೀನಪ್ಪನ ತಂದೆ ತಾತಂದಿರು ಅವರಿಂದ ಎಷ್ಟೋ ಸಹಾಯ ಪಡೆದಿದ್ದರು. ಅದನ್ನೇ ಹಿರಿಯರ ಪುಣ್ಯವೆನ್ನುವುದು. ಆ ಸಂಗತಿಯನ್ನು ಸೀನಪ್ಪ ಕೇಳಿರುವ ಕಾರಣ, ಅವನೇ ನ್ಯಾಯವಾದ ಬೆಲೆಯನ್ನು ಕೊಟ್ಟು ದಾನಪ್ಪನ ಹೊಲವನ್ನು ಕೊಂಡುಕೊಂಡ.

ಹೀಗೆ ಬಂದ ಹಣದಿಂದ ದಾನಪ್ಪ ಸಾಲವನ್ನೆಲ್ಲ ತೀರಿಸಿ, ಸಂಸಾರ ನಡೆಯಿಸಲಿಕ್ಕಾಗಿ ಕೂಲಿ ಕೆಲಸಗಳಿಗೆ ಹೋಗತೊಡಗಿದನು.

ಆ ಸಂಗತಿಯನ್ನು ತಿಳಿದು ಸೀನಪ್ಪ ದಾನಪ್ಪನನ್ನು ಕರೆದು, "ಹೊಲದಲ್ಲಿ ಕೆಲಸ ಮಾಡಲು ಇಷ್ಟವಿದ್ದರೆ ನಿನ್ನ ಹೊಲವನ್ನೇ ಗೇಣಿಗೆ ಮಾಡಿಕೊಂಡು ನೀನೇ ಗೆಯ್ಯಬಾರದೆ? ನಿನಗೂ ನಿನ್ನ ಕುಟುಂಬಕ್ಕೂ ಯಾವ ಕೊರತೆಯೂ ಬಾರದಂತೆ ನೋಡಿಕೊಳ್ಳುತ್ತೇನೆ" ಎಂದನು.

"ಹಾಗಾದರೆ ಮಹಾಭಾಗ್ಯವೇ. ನೀವು ನಮ್ಮ ಪಾಲಿಗೆ ದೇವರಂಥವರು!" ಎಂದು ಒಪ್ಪಿಕೊಂಡು ದಾನಪ್ಪ ಆ ದಿನವೇ ಸೀನಪ್ಪನ ಗೇಣಿಯ ಒಕ್ಕಲಿಗನಾಗಿ ಕೆಲಸಕ್ಕೆ ತೊಡಗಿದ.

ಒಂದುದಿನ ದಾನಪ್ಪ ತಾನು ಸೀನಪ್ಪನಿಗೆ ಮಾರಿದ ಹೊಲವನ್ನು ಉಳುತ್ತಾ ಇರುವಾಗ ನೇಗಿಲಿನ ತುದಿಗೆ

ಡಿ. ವಿ. ರಾಜಾರಾವ್



ಯಾವುದೋ ಅಡ್ಡ ತಗಲಿತು. ಗುದ್ದಲಿಯಿಂದ ಅಗೆದು ನೋಡಿದಾಗ ಎರಡು ಬಿಂದಿಗೆಗಳು ಕಾಣಿಸಿದುವು! ಅವುಗಳ ಬಾಯಿ ಕಟ್ಟು ಬಿಡಿಸಿ ನೋಡಿದಾಗ ಬಿಂದಿಗೆಗಳ ತುಂಬಾ ಬಂಗಾರದ ನಾಣ್ಯಗಳೂ ನಗಗಳೂ ಇದ್ದುವು.

ದಾನಪ್ಪ ಕೂಡಲೇ ಆ ಎರಡು ಬಿಂದಿಗೆಗಳನ್ನೂ ಭುಜದ ಮೇಲೆ ಎತ್ತಿಕೊಂಡು ನೆಟ್ಟಗೆ ಸೀನಪ್ಪನ ಮನೆಗೆ ತಂದು, "ಈ ಬಿಂದಿಗೆಗಳು ಹೊಲದ ನೆಲದಲ್ಲಿ ದೊರಕಿದುವು. ಜಾಗ್ರತೆಯಾಗಿಟ್ಟುಕೊಳ್ಳಿ. ನಾನು ಎತ್ತುಗಳನ್ನು ಹೊಲದಲ್ಲೇ ಬಿಟ್ಟು ಬಂದಿದ್ದೇನೆ. ಕೂಡಲೇ ಹೋಗಬೇಕು" ಎಂದು ಬಿಂದಿಗೆಗಳನ್ನು ಅಲ್ಲಿಟ್ಟು ಹೊರಡಲು ಸಿದ್ಧನಾದನು.

ದಾನಪ್ಪನ ಪ್ರಾಮಾಣಿಕತನಕ್ಕೆ ಸೀನಪ್ಪ ಆಶ್ಚರ್ಯಪಡುತ್ತ—"ದಾನಪ್ಪಾ, ನಿನ್ನ ಪ್ರಾಮಾಣಿಕತನವನ್ನು ಹೇಗೆ ಹೊಗಳುವುದೆಂದು ತಿಳಿಯುವುದಿಲ್ಲ. ಇಷ್ಟೊಂದು ಧನ ದೊರಕಿದಾಗ ನೀನು ಸ್ವಲ್ಪ ಕೂಡ ಇಟ್ಟುಕೊಳ್ಳದೆ ತಂದು ನನಗೆ ಕೊಟ್ಟಿರುವೆಯಲ್ಲ! ಆದರೆ ಇವು ಸಿಕ್ಕಿದ್ದು ನಿನ್ನ ಹೊಲದಲ್ಲಿಯಾದುದರಿಂದ ನ್ಯಾಯವಾಗಿ ಈ ಬಿಂದಿಗೆಗಳು ನಿನಗೇ ಸೇರಬೇಕು" ಎಂದನು.

"ಅದು ಹೇಗೆ ಸ್ವಾಮಿ? ಆ ಹೊಲವನ್ನು ನಿಮಗೆ ಮಾರಿದ ಮೇಲೆ ಎಲ್ಲಾ ನಿಮ್ಮದೇ ಆಗುವುದಲ್ಲದೆ ನನ್ನದು ಹೇಗೆ ಆಗುತ್ತದೆ? ಅದರಲ್ಲಿ ಏನು ಸಿಕ್ಕಿದರೂ ಅದು ನಿಮ್ಮದೇ. ನಿಮ್ಮ ದಯೆಯಿಂದಲೇ ಆ ಹೊಲವನ್ನು ನಾನು ಉಳುತ್ತಿದ್ದೇನೆ ಹೊರತು, ನೀವು ಅದನ್ನು ಬೇರೆ ಯಾರಿಂದಲೂ ಲಾದರೂ ಉಳುಮೆ ಮಾಡಿಸುತ್ತಿದ್ದಿರಿ. ನನ್ನದೇನಿದೆ?" ಎಂದ ದಾನಪ್ಪ.

"ನೋಡು ದಾನಪ್ಪಾ, ನಾನು ಹೊಲದಲ್ಲಿ ಬೆಳೆಸುವ ಹಕ್ಕನ್ನು ತೆಗೆದುಕೊಂಡೆನೇ ಹೊರತು, ಅಲ್ಲಿಯ ಇಂತಹ ನಿಧಿ ನಿಕ್ಷೇಪಗಳ ಬೆಲೆಯನ್ನು ನಿನಗೆ ಕೊಟ್ಟಿದ್ದೇನೆಯೆ? ಯಾರೇ ಈ ಹೊಲವನ್ನು ಉತ್ತರೂ ಈ ನಿಧಿಯನ್ನು ನ್ಯಾಯವಾಗಿ ನಾನು ನಿನಗೇ ಕೊಡುವವನು. ನ್ಯಾಯಕ್ಕೆ ತಪ್ಪಿ ನಡೆದರೆ ದೇವರು ಮೆಚ್ಚಲಾರನಪ್ಪಾ" ಎಂದ ಸೀನಪ್ಪ.

"ನಾನು ಕೂಡ ಅದನ್ನೇ ಹೇಳುತ್ತೇನೆ ಸ್ವಾಮಿ. ಅದರಿಂದ ಒಂದು ನಾಣ್ಯ ತೆಗೆದುಕೊಂಡರೂ ನನ್ನನ್ನು ದೇವರು ಮೆಚ್ಚುವನೆ? ಎಷ್ಟೊಂದು ಅಧರ್ಮವದು!" ಎಂದ ದಾನಪ್ಪ.

ಇದು ಅವರಿಬ್ಬರೊಳಗೆ ಬಗೆಹರಿಯದುದರಿಂದ, ಅವರು ಗ್ರಾಮಾಧಿಕಾರಿಯ ಬಳಿಗೆ ಹೋಗಿ ತಮ್ಮ ಸಮಸ್ಯೆಯನ್ನು ಹೇಳಿಕೊಂಡರು. ಆ ಸಮಯದಲ್ಲಿ ಗ್ರಾಮಾಧಿಕಾರಿಯ ತಮ್ಮನಾದ ಗೋಪರಾಯನೆಂಬವನೂ ಅಲ್ಲಿಯೇ ಎಲ್ಲವನ್ನೂ ಕೇಳಿಕೊಂಡಿದ್ದ.

ಅವರ ಈ ಸಮಸ್ಯೆ ಗ್ರಾಮಾಧಿಕಾರಿಗೆ ಬಹಳ ವಿಚಿತ್ರವಾಗಿ ತೋರಿತು. ಎಲ್ಲವನ್ನೂ ಕೇಳಿ ಅವನು "ಇದಕ್ಕಾಗಿ ಇಷ್ಟೆಲ್ಲ ಗೊಡವೆ ಏತಕ್ಕೆ? ಒಬ್ಬೊ

ಬ್ಬರು ಒಂದೊಂದು ಬಿಂದಿಗೆ ತೆಗೆದುಕೊಂಡರೆ ಯಾರಿಗೂ ಅನ್ಯಾಯವಾಗುವುದಿಲ್ಲವಷ್ಟೆ?" ಎಂದನು.

ಅದಕ್ಕೆ ಅವರಿಬ್ಬರೂ ಒಪ್ಪಿಕೊಳ್ಳಲಿಲ್ಲ. ಅಷ್ಟು ದೊಡ್ಡ ಅನ್ಯಾಯವನ್ನು ತಾವು ಮಾಡಲಾಗುವುದಿಲ್ಲ ವೆಂದು ಬಿಟ್ಟರು. ಆಗ ಗೋಪರಾಯನು ಈ ವಿಷಯಕ್ಕೆ ತಲೆ ಹಾಕಿ, "ನಾನು ಹೇಳಿದಂತೆ ಮಾಡಿ ಬಿಡಿ. ಆಗ ನಿಮಗಿಬ್ಬರಿಗೂ ನ್ಯಾಯವಾಗುವ ಅವ ಕಾಶ ಒಂದೇ ಬರುತ್ತೆ" ಎಂದನು.

"ಅಪ್ಪಣೆಯಾಗಲಿ" ಎಂದರು ಇಬ್ಬರೂ.

"ನೀವಿಬ್ಬರೂ ಒಂದೊಂದು ಬಿಂದಿಗೆ ತೆಗೆದು ಕೊಂಡು ನಿಮ್ಮ ನಿಮ್ಮ ಮನೆಗಳಿಗೆ ಹೋಗಿಬಿಡಿರಿ. ಒಂದು ತಿಂಗಳು ಬಿಂದಿಗೆ ನಿಮ್ಮ ಹತ್ತಿರ ಹಾಗೇ ಇರಲಿ. ಆಮೇಲೆ ನ್ಯಾಯವಾದ ತೀರ್ಪನ್ನು ಬೇಕಾ ದರೆ ಹೇಳೋಣ, ನ್ಯಾಯವು ಬರಬೇಕಾದರೆ ಸ್ವಲ್ಪ ಕಾಲಾವಕಾಶವೂ ಬೇಕು" ಎಂದ ಗೋಪರಾಯ.

"ಹಾಗಾದರೆ ಸರಿ" ಎಂದು ಒಪ್ಪಿಕೊಂಡು, ಇಬ್ಬರೂ ಒಂದೊಂದು ಬಿಂದಿಗೆಯನ್ನು ತೆಗೆದುಕೊಂಡು ತಮ್ಮ ತಮ್ಮ ಮನೆಗೆ ಹೊರಟು ಹೋದರು. ಅವರು ಹೊರಟುಹೋದ ಕೂಡಲೇ ಗ್ರಾಮಾಧಿ ಕಾರಿ ತನ್ನ ತಮ್ಮನನ್ನು ನೋಡಿ, "ಇದೆಂತಹ ಸಲಹೆ ಯಪ್ಪಾ? ಒಂದು ತಿಂಗಳ ಮೇಲೆ ಅವರು ಬಂದರೆ ನಾನು ಏನೆಂದು ತೀರ್ಪು ಹೇಳಲಿ? ಆಗ ಮಾತ್ರ ಹೊಸ ನ್ಯಾಯ ಎಲ್ಲಿಂದ ಬರುತ್ತದೆ?" ಎಂದು ಕೇಳಿದನು.

"ಒಂದು ತಿಂಗಳು ಕಳೆದ ಮೇಲೆ ಅವರು ನಮ್ಮ ತೀರ್ಪನ್ನು ಕೇಳಲು ಬಂದರೆ ತಾನೆ?" ಎಂದ ಗೋಪರಾಯ.

"ಅದೇನು? ಏಕೆ ಬರಲಾರರು?" ಎಂದು ಗ್ರಾಮಾಧಿಕಾರಿ ಆಶ್ಚರ್ಯದಿಂದ ಕೇಳಿದ.

"ಒಂದು ವಾರದವರೆಗೆ ಸುಮ್ಮನಿರು ಅಣ್ಣಾ. ಯಾಕೆ ಬರುವುದಿಲ್ಲವೆಂಬುದು ನಿನಗೇ ಗೊತ್ತಾಗು ತ್ತದೆ" ಎಂದ ಗೋಪರಾಯ.

ಒಂದುವಾರದ ದಿನಗಳು ಕಳೆದು ಹೋದುವು. ಒಂದುದಿನ ಅರ್ಧ ರಾತ್ರಿಯ ಹೊತ್ತಿಗೆ ಗೋಪರಾಯ



ತನ್ನ ಅಣ್ಣನನ್ನು ಕರೆದುಕೊಂಡು ದಾನಪ್ಪನ ಮನೆಯ ಬಳಿಗೆ ಬಂದು ನಿಂತನು. ಆಗ ಮನೆಯೊಳಗಿನಿಂದ ದಾನಪ್ಪನ ಮಾತುಗಳು ಕೇಳಿಸುತ್ತಿದ್ದುವು.

"ಮೊದಲಿನಷ್ಟು ತಾಳುವ ಶಕ್ತಿ ಈಗ ಇಲ್ಲ. ಎರಡು ಬಿಂದಿಗೆಗಳನ್ನೂ ನಾನೇ ತೆಗೆದುಕೊಂಡು ಸುಮ್ಮನಿರಬೇಕಿತ್ತು. ಆ ಹೊಲ ಮೊದಲು ನನ್ನದೇ ತಾನೆ? ಮಾರುವುದಕ್ಕೆ ಮೊದಲು ಸಿಕ್ಕಿರುತ್ತಿದ್ದರೆ ಯಾವ ರಗಳೆಯೂ ಇರುತ್ತಿದ್ದಿಲ್ಲ. ಇನ್ನು ಕೇಳುವುದು ನಗೆಗೇಡು. ಈ ಬಿಂದಿಗೆಯಲ್ಲಿರುವ ಬಂಗಾರದಿಂದ ಸ್ವಲ್ಪ ಹೊಲವನ್ನು ಕೊಂಡುಕೊಂಡು ಹಾಯಾಗಿರುವುದೇ ಒಳ್ಳೇದು" ಎನ್ನುತ್ತಿದ್ದ ದಾನಯ್ಯ.

ಆ ಮನೆಯಿಂದ ಗ್ರಾಮಾಧಿಕಾರಿಯೂ ಗೋಪರಾಯನೂ, ಸೀನಪ್ಪನ ಮನೆಗೆ ಹೋಗಿ ಮರೆಯಲ್ಲಿ ನಿಂತು, ಒಳಗಿನ ಮಾತುಗಳನ್ನು ಕೇಳತೊಡಗಿದರು.

"ದಾನಪ್ಪ ಹೇಳಿದ ಹಾಗೆ ಕೇಳಿ ಎರಡು ಬಿಂದಿಗೆಗಳನ್ನೂ ಇಟ್ಟುಕೊಳ್ಳದೆ ಹೋದುದು ತಪ್ಪೇ ಆಯಿತು. ಹೊಲವು ನನ್ನದಾದ ಮೇಲೆ ಅಲ್ಲಿ ಸಿಕ್ಕಿದ ಬಿಂದಿಗೆಗಳೂ ನನ್ನವೇ ಅಲ್ಲವೆ? ಅವುಗಳನ್ನು ದಾನಪ್ಪ ಹುಗಿದಿಟ್ಟದ್ದಂತೂ ಅಲ್ಲವಷ್ಟೆ? ಆದರೆ ಈಗ ಗ್ರಾಮಾಧಿಕಾಯ ಬಳಿಗೆ ಹೋಗಿ ಆ ಎರಡನೇ ಬಿಂದಿಗೆ ಕೂಡಾ ನನಗೇ ಕೊಡಿಸಬೇಕೆಂದು ಕೇಳುವುದು ಭಾವ್ಯವೆನಿಸುವುದಿಲ್ಲ. ಸಿಕ್ಕಿದ್ದು ಲಾಭವೆಂದು ತೃಪ್ತಿಪಡಬೇಕಾಯಿತು" ಎನ್ನುತ್ತಿದ್ದ ಸೀನಪ್ಪ, ಅಲ್ಲಿಂದ ಅಣ್ಣ ತಮ್ಮಂದಿರಿಬ್ಬರೂ ಮನೆಗೆ ಹಿಂದಿರುಗಿದರು. ಆಗ ಗ್ರಾಮಾಧಿಕಾರಿ ಗೋಪರಾಯನೊಂದಿಗೆ, "ನೀನು ಹೇಳಿದ ಮಾತು ಎಷ್ಟು ನಿಜವಾಗಿದೆ! ಅವರಿನ್ನು ತೀರ್ಪು ಕೇಳಲು ನಮ್ಮ ಬಳಿಗೆ ಬಾರರು. ಬಹಳ ನೀತಿವಂತರ ಹಾಗೆ ಮಾತಾಡಿದರಲ್ಲ! ಅವರ ಅಸಲು ಸಂಗತಿ ನೀನು ಹೇಗೆ ಕಂಡುಹಿಡಿದೆ?" ಎಂದು ಕೇಳಿದ.

"ಅಣ್ಣಾ, ಅವರ ನೀತಿಯಲ್ಲಾಗಲೀ, ಪ್ರಾಮಾಣಿಕತೆಯಲ್ಲಾಗಲೀ ತಪ್ಪು ಹಿಡಿಯಬೇಡ. ನೀತಿಯ ಗಂಧವೇ ಇಲ್ಲದವನಾಗಿರುತ್ತಿದ್ದರೆ ದಾನಪ್ಪ ಆ ಬಿಂದಿಗೆಗಳನ್ನು ಸೀನಪ್ಪನಿಗೆ ತೋರಿಸುತ್ತಲೇ ಇದ್ದಿಲ್ಲ. ಸೀನಪ್ಪ ಕೂಡಾ ನೀತಿವಂತನಾದುದರಿಂದಲೇ ಅವುಗಳನ್ನು ನಿರಾಕರಿಸಿದನು. ಆದರೆ ಒಂದುವಾರದಷ್ಟು ದಿನಗಳ ವರೆಗೆ ಧನಲಕ್ಷ್ಮಿ ಕಣ್ಣೆದಿರು ಕಾಣಿಸುತ್ತಾ ಇದ್ದರೆ ಎಂತಹ ನೀತಿವಂತನಾದರೂ ಬದಲಾಯಿಸಿಬಿಡುತ್ತಾನೆ. ಅದು ಮಾನವರ ಸ್ವಭಾವ. ಸ್ವಭಾವವನ್ನು ಬದಲಾಯಿಸುವ ಶಕ್ತಿ ಧನಕ್ಕೆ ಇದೆ ಅಣ್ಣಾ" ಎಂದ ಗೋಪರಾಯ.

ಆ ರಾತ್ರಿ ದಾನಪ್ಪನಿಂದಲೂ, ಸೀನಪ್ಪನಿಂದಲೂ ಹಾಗೆ ಮಾತು ಹೊರಡುವಂತೆ ಮಾಡಿದವರು ಗೋಪರಾಯನ ಕಡೆಯವರೇ!





# ದೈವಸಹಾಯ

ಹಿಮಾಲಯ ಪರ್ವತಗಳ ಕೆಳಭಾಗದ ಬೆಟ್ಟಗಳಲ್ಲಿ ಒಂದು ಕಣಿವೆಯೂರು ಇದ್ದಿತು. ಅಲ್ಲಿ ಅನೇಕ ಸಾವಿರ ವರ್ಷಗಳಿಂದ ಒಂದು ಬಗೆಯ ಗುಡ್ಡ ಜಾತಿಯ ಜನರು ವಾಸಮಾಡಿಕೊಂಡಿದ್ದರು. ಆ ಜಾತಿಯವರು ಪಶುಗಳನ್ನು ಪಾಲಿಸುವರು. ಧಾನ್ಯಗಳನ್ನು ಬೆಳೆಸುವರು. ಹೀಗೆಯೇ ಪುರಾತನಕಾಲದಿಂದಲೂ ಜೀವಿಸಿಕೊಂಡಿದ್ದರು. ಆದರೆ ಬರಬರುತ್ತ ಆ ಕಣಿವೆಯಲ್ಲಿ ಪೈರು ಮಾಡುವ ಕೆಲಸ ಬಹಳ ಕಷ್ಟವಾಗ ತೊಡಗಿತು. ಪಶುಗಳನ್ನು ಮೇಯಿಸಲೂ ಸಾಧ್ಯವಿಲ್ಲದಂತಾಯಿತು. ಕಾರಣವೇನೆಂದರೆ; ಪ್ರತಿ ವರ್ಷವೂ ಬೆಟ್ಟಗಳ ಮೇಲಿನಿಂದ ಚಿಕ್ಕವೂ ದೊಡ್ಡವೂ ಆದ ಬಂಡೇಕಲ್ಲುಗಳು ಕಣಿವೆಯೊಳಗೆ ಹೊರಳಿಹೊರಳಿ ಬೀಳುತ್ತಿದ್ದುವು. ಹೀಗೆ ನೂರಾರು ವರ್ಷಗಳು ಕಳೆಯುವಷ್ಟರಲ್ಲಿ ಕಣಿವೆಯೂರಿನ ಪ್ರದೇಶವೆಲ್ಲಾ ಬಂಡೆಗಲ್ಲುಗಳಿಂದ ತುಂಬಿ ಹೋಯಿತು.

ಇನ್ನು ಆ ಕಣಿವೆಯೊಳಗೆ ವಾಸಮಾಡಿಕೊಂಡಿರುವುದು ಸಾಧ್ಯವಿಲ್ಲವೆನಿಸಿತು. ಅನೇಕಮಂದಿ ಯುವಕರು ಒಂದಾಗೂಡಿ, ಚರ್ಚೆಮಾಡಿ, ತಮ್ಮ ನಾಯಕನ ಬಳಿಗೆ ಹೋಗಿ, "ತಾತಾ, ಇನ್ನು ಸ್ಥಳವನ್ನು ಬದಲಾಯಿಸದೇಹೋದರೆ ನಾವೆಲ್ಲಾ ನಾಮರೂಪಗಳಿಲ್ಲದೆ ಹೋಗುತ್ತೇವೆ. ಹೊಟ್ಟೆ ತುಂಬಾ ತಿನ್ನಲು ನಮಗೂ ಇಲ್ಲ, ನಮ್ಮ ಪಶುಗಳಿಗೂ ಇಲ್ಲ. ಬೇರೆ ಪ್ರದೇಶಕ್ಕೆ ಹೋಗಲೇಬೇಕು" ಎಂದರು.

ವೃದ್ಧನಾಯಕನು ಅವರನ್ನೆಲ್ಲಾ ವಿಚಾರಪೂರ್ವಕವಾಗಿ ನೋಡಿ, "ಈ ಕಣಿವೆ ಅನಾದಿಕಾಲದಿಂದಲೂ ನಮ್ಮದೇ ಕಂಡಿರ ? ನಮ್ಮ ಮುತ್ತಾತಂದಿರೂ, ಅವರ ಮುತ್ತಾತಂದಿರೂ ಇಲ್ಲಿಯ ಮಣ್ಣಿನಲ್ಲಿಯೇ ಕೂಡಿಹೋಗಿದ್ದಾರೆ. ಇನ್ನೊಂದು ಸ್ಥಳಕ್ಕೆ ಹೋದರೆ ನಮ್ಮ ಬದುಕೂ ಬದಲಾವಣೆ ಹೊಂದುತ್ತದೆ. ಆಗ ತುಂಬಾ ಕಷ್ಟಪಡಬೇಕಾಗುತ್ತದೆ" ಎಂದನು.

"ಇಲ್ಲಿದ್ದು ನಮ್ಮ ಬದುಕನ್ನು ನಾಶಮಾಡಿಕೊಳ್ಳುವುದಕ್ಕಿಂತ ಬದಲಾವಣೆ ಹೊಂದುವುದೇ ಮೇಲಲ್ಲವೆ ?" ಎಂದರು ಯುವಕರು.

"ಈ ಕಣಿವೆಯೂರು ಸತ್ತುಹೋಯಿತು. ಇದರಲ್ಲಿ ನಾವಿನ್ನು ಬದುಕಲಾರೆವು" ಎಂದರು ಕೆಲವರು.

"ಈ ಕಣಿವೆ ಸಾಯಲಿಲ್ಲ, ಅಪ್ಪಗಳಿರಾ ! ಇದರಲ್ಲಿ ಚಿನ್ನದಂಥ ಬೆಳೆ ಅಡಗಿದೆ. ತೋರಿಸುತ್ತೇನೆ ಬನ್ನಿ" ಎಂದು ಹೇಳಿ ವೃದ್ಧನಾಯಕನು ಯುವಕರನ್ನು

ಎನ್. ಲೀಲಾವೆಂಕಟಕೃಷ್ಣಪ್ಪ

ಕರೆದುಕೊಂಡು ಹೋಗಿ, ಒಂದು ಅಗಲವಾದ ಬಂಡೆಯನ್ನು ತೋರಿಸಿ, ಅದನ್ನು ಹೊರಳಿಸಲು ಹೇಳಿದನು. ಹತ್ತುಮಂದಿ ಸೇರಿ ಹಿಡಿದು ಆ ಬಂಡೆಯನ್ನು ಎತ್ತಿ ಬದಿಗೆ ದೂಡಿದರು. ಅದರ ಕೆಳಗೆ ಕಪ್ಪಗೆ ಮಣ್ಣು ಕಾಣಿಸಿತು.

"ನೋಡಿ! ಇದು ಚಿನ್ನದಂತಹ ಮಣ್ಣು. ಇದರಲ್ಲಿ ಬಂಗಾರದ ಬೆಳೆ ಬರುತ್ತದೆ. ಎಲ್ಲಾ ಬಂಡೆಕಲ್ಲುಗಳ ಅಡಿಯಲ್ಲಿಯೂ ಇಂತಹ ಮಣ್ಣೇ ಇದೆ" ಎಂದ ಮುದುಕ.

"ಕಣಿವೆ ತುಂಬಾ ಸಾವಿರಾರು ಬಂಡೆಗಲ್ಲುಗಳಿವೆ. ಇವುಗಳನ್ನೆಲ್ಲಾ ಹೇಗೆ ಹೊರಳಿಸಲು ಸಾಧ್ಯವಾದೀತು? ಎಲ್ಲಿಗೆ ಹೊರಳಿಸುವುದು ?" ಎಂದರು ಯುವಕರು.

"ಸರಿ, ನಿಮ್ಮಿಷ್ಟದಂತೆಯೇ ಆಗಲಿ. ನಾನು ನಮ್ಮ ಗಣದೇವತೆಯನ್ನು ಆರಾಧನೆ ಮಾಡಿ, ಆಕೆಯ ಆಜ್ಞೆಯ ಪ್ರಕಾರ ಏನೋ ಒಂದು ಮಾಡುತ್ತೇನೆ" ಎಂದ ವೃದ್ಧನಾಯಕ.

ಅದರಂತೆ ಮಾರನೇದಿನ ವೃದ್ಧನಾಯಕನು ಎಲ್ಲಾ ಗುಡ್ಡ ಜಾತಿಯವರನ್ನು ಸಭೆಗೆ ಕರೆದು "ಗಣದೇವತೆ ನಿನ್ನೆ ರಾತ್ರಿ ನನಗೆ ಸ್ವಪ್ನದಲ್ಲಿ ಕಾಣಿಸಿ ಅಪ್ಪಣೆ ಕೊಟ್ಟಿದ್ದಾಳೆ. ನಾವು ಆ ಮಹಾತಾಯಿಗೆ ದೊಡ್ಡದೊಂದು ಆಲಯವನ್ನು ಕಟ್ಟಬೇಕಂತೆ. ಆಲಯದ ಸುತ್ತಲೂ ಮನೆ ಕಟ್ಟಿಕೊಂಡು ನಾವೆಲ್ಲಾ ಅದರೊಳಗಿರ ಬೇಕಂತೆ. ಹಾಗೆ ಮಾಡಿದರೆ ಹೊರತು ಎಲ್ಲಿ ಹೋದರೂ ನಮಗೆ ಒಳಿತಾಗುವುದಿಲ್ಲವಂತೆ" ಎಂದ.

ಅದನ್ನು ಕೇಳಿ ಎಲ್ಲರ ಮನಸ್ಸಿನಲ್ಲಿಯೂ ಹೊಸ ಉತ್ಸಾಹದ ಅಲೆಯೆದ್ದಿತು. ಚಿಕ್ಕ ಮಕ್ಕಳಿಂದ ಹಿಡಿದು ಎಲ್ಲರೂ ಒಗ್ಗಟ್ಟಾಗಿ ಸಹಾಯ ಮಾಡುತ್ತ ಆಲಯವನ್ನು ಕಟ್ಟಲು ಕಲ್ಲುಗಳನ್ನು ತಂದು ತಂದು ಒಂದು ಕಡೆಯಲ್ಲಿ ಪೇರಿಸ ತೊಡಗಿದರು. ಗರ್ಭಗುಡಿ ಆರಾಳು ಎತ್ತರದಲ್ಲಿ ಇರಬೇಕೆಂದು ವೃದ್ಧನಾಯಕನು ಹೇಳಿದ್ದನು. ಅಷ್ಟೆತ್ತರದವರೆಗೆ ಬಂಡೆಕಲ್ಲುಗಳನ್ನು ಪೇರಿಸಿ, ಅದರ ಮೇಲೆ ದೇವಾಲಯವನ್ನು ನಿರ್ಮಿಸಿದರು,

ಅದಾದನಂತರ ಸುತ್ತಲೂ ಮನೆಗಳನ್ನು ಕಟ್ಟಿದರು. ಅವುಗಳಿಗೆ ಕೂಡಾ ಕಣಿವೆಯಲ್ಲಿ ದೊರಕಿದ ಕಲ್ಲುಗಳನ್ನೇ ಉಪಯೋಗಿಸಿದರು. ಈ ಎಲ್ಲಾ ಕೆಲಸ ಮುಗಿದಾಗ ಆ ಕಣಿವೆಯೂರಿನ ಮುಕ್ಕಾಲು ಭಾಗದಷ್ಟು ನೆಲ ಹೊರಬಿದ್ದಿತು. ಆ ಸಾರವಂತವಾದ ನೆಲದಲ್ಲಿ ಯಾವ ಬೀಜ ಹಾಕಿದರೂ ಆಳೆತ್ತರ ಎದ್ದು ತುಂಬಿದ ಕದಿರುಗಳನ್ನು ಬಿಡುತ್ತಿದ್ದುವು. ಮಣ್ಣು ಆಳವಾಗಿಲ್ಲದ ಪ್ರದೇಶಗಳಲ್ಲಿ ದಟ್ಟವಾಗಿ ಹಸಿರು ಹುಲ್ಲೂ ಬೆಳೆಯಿತು. ಆ ಬಾಲ ಗೋಪಾಲರು ಬಹಳ ತೃಪ್ತರಾಗಿ ಗಣದೇವತೆಗೆ ಉತ್ಸವ ಮಾಡಿದರು.





# ಯಕ್ಷ ಪರ್ವತ

ಅನೇಕ ನೂರು ವರ್ಷಗಳ ಹಿಂದೆ ಈ ಕಥೆಗೆ ಬೇಕಾದ ವಸ್ತುಗಳು ಶಿಲೆಗಳ ಮೇಲೆಯೂ, ಹೆಮ್ಮರಗಳ ಕಾಂಡಗಳ ಮೇಲೆಯೂ ಕಂಡುಬಂದಿರುವುದೆಂದು ಬೇಟೆಗಾರರು ಸಂಗ್ರಹಿಸಿಕೊಂಡ ಲೇಖನಗಳಿಂದ ತಿಳಿದುಬರುತ್ತದೆ. ಆಗ ಭೂಖಂಡಗಳ ರೂಪವು ಹೀಗಿರದಿದ್ದರೂ, ಭಾರತದೇಶವೂ ನರ್ಮದಾ ನದಿಯೂ, ಅದರ ಪ್ರಾಂತದಲ್ಲಿ ಬಹುದೊಡ್ಡ ಅರಣ್ಯವೂ ಇದ್ದುದಾಗಿ ತಿಳಿದುಬರುತ್ತದೆ. ಆ ಅರಣ್ಯಗಳಲ್ಲಿ ಅನೇಕ ಬಗೆಯ ಕಾಡುಜಾತಿಯ ಅನಾಗರೀಕ ಮನುಷ್ಯರು ಬೇರೆಬೇರೆ ಗುಂಪುಗಳಾಗಿ ವಾಸಿಸಿಕೊಂಡಿದ್ದರು. ಅವರಲ್ಲಿ ಒಂದೊಂದು ಜಾತಿಗೆ ಒಬ್ಬೊಬ್ಬ ನಾಯಕ, ಅಥವಾ ರಾಜ ಇರುತ್ತಿದ್ದನು. ತನ್ನ ಗುಂಪಿನ ಮೇಲೆ ಅವನದೇ ಸರ್ವಾಧಿಕಾರ. ಎಲ್ಲಾ ಗುಂಪಿನ ನಾಯಕರೂ ಬೇರೆ ಬೇರೆ ಸರ್ವಾಧಿಕಾರಿಗಳೇ ಆದುದರಿಂದ ಅವರೊಳಗೆ ಐಕಮತ್ಯವು ಲವಲೇಶವೂ ಕೂಡುತಿರಲಿಲ್ಲ. ಯಾವಾಗಲೂ ಒಬ್ಬರ ಮೇಲೊಬ್ಬರು ಏರಿ ಹೋಗಿ ಜಗಳ ಮಾಡುತ್ತಲೇ ಇದ್ದರು. ಸಾವು ನೋವುಗಳೆಂದರೆ ಸರ್ವಸಾಮಾನ್ಯ ಸಂಗತಿ. ರಕ್ತವೆಂದರೆ ಬಾಯಿಯಿಂದ ಒಸರುವ ಎಂಜಲಿನಷ್ಟೇ ಸರ್ವಸಾಧಾರಣ ವಿಷಯ. ಅವನಿಗಿಂತ ತಾನು ಮೇಲು ಎಂಬ ಭಾವನೆಯೇ ಎಲ್ಲರಲ್ಲಿಯೂ.

ಇಂತಹ ಜಗಳಗಂಟಿ ಕಾಡು ಜಾತಿಗಳಲ್ಲಿ ಖಡ್ಗಮೃಗ ಜಾತಿಯೂ ಒಂದು. ಅವರು ಅರಣ್ಯದಲ್ಲಿರುವ ಬೆಟ್ಟದಲ್ಲಿ ಅರಣ್ಯಪುರವೆಂಬ ದೊಡ್ಡದೊಂದು ಊರನ್ನು ಕಟ್ಟಿಕೊಂಡು, ಅದರೊಳಗೇ ವಾಸವಾಗಿರುವರು. ಅವರಲ್ಲಿಯ ವಿಶೇಷವೇನೆಂದರೆ, ಮೊರಟು ಪ್ರಾಣಿಯಾದ ಖಡ್ಗಮೃಗಗಳನ್ನು ತಮ್ಮಿಷ್ಟಾನುಸಾರವಾಗಿ ಪಳಗಿಸಿ, ಅವುಗಳಿಂದ ವ್ಯವಸಾಯ ಮೊದಲಾದ ಕೆಲಸಗಳನ್ನೂ ಸಾಧಿಸುತ್ತಿದ್ದರು; ವಾಹನವನ್ನಾಗಿಯೂ ಉಪಯೋಗಿಸುತ್ತಿದ್ದರು. ಅಂತೆಯೇ ಈ ಅರಣ್ಯಪುರದವರಿಗೆ ಖಡ್ಗಮೃಗೀಯರೆಂಬ ಹೆಸರು ಬಂದಿತ್ತು.

ಈ ಖಡ್ಗಮೃಗೀಯರಿಗೆಲ್ಲ ಅರಣ್ಯಮಲ್ಲನೆಂಬವನು ನಾಯಕನಾಗಿ ಏರ್ಪಟ್ಟಿದ್ದನು. ಇವನು ಅಧಿ




ಕಾರಕ್ಕೆ ಬರುವ ಮೊದಲು ಅದೇ ಜಾತಿಯ ಗಣಾಚಾರಿ ಎಂಬವನೊಬ್ಬ, ಇವನನ್ನು ಕೊಂದು ತಾನೇ ಪಟ್ಟಕ್ಕೆ ಬರಲು ಪ್ರಯತ್ನಪಟ್ಟನು. ಆಗ ದೇವರ ಹಾಗೆ ಬಂದೊದಗಿದ ಇಬ್ಬರು ಕ್ಷತ್ರಿಯ ಯುವಕರು, ಅನ್ಯಾಯದ ಗಣಾಚಾರಿಯನ್ನು ಹತಮಾಡಿಸಿ, ಅರಣ್ಯಮಲ್ಲನು ರಾಜನಾಗಿ ಬರಲು ಸಹಕರಿಸಿದ್ದರು. ದುಷ್ಟ ಗಣಾಚಾರಿ ಹುಲಿಯ ಬಾಯಿಗೆ ಬಿದ್ದು ಜೀರ್ಣವಾದನು. ಈಗ ಅರಣ್ಯಮಲ್ಲನಿಗೆ ಯಾರೂ ಇದಿರಿಲ್ಲ.

ಹೀಗೆ ರಾಜನಾದ ಅರಣ್ಯಮಲ್ಲನ ಪರಿಪಾಲನೆ ವಿಘ್ನಗಳೇನಿಲ್ಲದೆ ಸುಗಮವಾಗಿ ಸಾಗಿಕೊಂಡಿದ್ದಿತು. ಈ ಮೊದಲು ಕೇವಲ ಬೇಟೆಯಲ್ಲಿಯೇ ಕಾಲ ಕಳೆದುಕೊಂಡಿದ್ದ ಖಡ್ಗಮೃಗೀಯರು, ಈಗ ಸುತ್ತುಮುತ್ತಣ ಅರಣ್ಯ ಪ್ರದೇಶಗಳಲ್ಲಿ ವ್ಯವಸಾಯವನ್ನು ಪ್ರಾರಂಭಿಸಿ ಜೋಳ, ಗೋದಿ ಮೊದಲಾದ ಧಾನ್ಯಗಳನ್ನು ಬೆಳೆಯಿಸ ತೊಡಗಿದ್ದರು. ಈ ಬಗೆಯ ವ್ಯವಸಾಯದಿಂದಾಗಿ ಇತರ ಅರಣ್ಯ ಜಾತಿಯವರ ದೃಷ್ಟಿಯಲ್ಲಿ ಖಡ್ಗಮೃಗೀಯರು ವಿಶೇಷದವರೆನಿಸಿದರು. ಇವರ ರಾಜ ಅರಣ್ಯಮಲ್ಲನು ಅಧಿಕಾರಕ್ಕೆ ಬಂದು ಒಂದು ವರ್ಷ ಪೂರ್ತಿಯಾಯಿತು. ಆ ದಿನ ಖಡ್ಗಮೃಗೀಯರೆಲ್ಲಾ ವಾರ್ಷಿಕೋತ್ಸವವನ್ನು ಆಚರಿಸಲು ಭಾರಿ ಏರ್ಪಾಡುಗಳನ್ನು ಮಾಡಿದ್ದರು. ಯುವಕರು ಈಟಿ ಕತ್ತಿಗಳನ್ನು ತಿರುಗಿಸುವುದು, ಬಹಳ ಎತ್ತರದಲ್ಲಿ ಕಟ್ಟಲಾದ ಗಳುವಿನ ಮೇಲಿನಿಂದ ಖಡ್ಗಮೃಗಗಳನ್ನು ಧುಮಕಿಸುವುದು, ಮಲ್ಲಯುದ್ಧ ಇವೇ ಮೊದಲಾದ ಬಲಪ್ರದರ್ಶನಗಳಿಂದ ಆ ಬಾಲಗೋಪಾಲರನ್ನೆಲ್ಲಾ ಆಕರ್ಷಿಸಿಕೊಂಡಿದ್ದರು. ಸ್ತ್ರೀಯರೂ ಪುರುಷರೂ ಆನಂದ ಕೋಲಾಹಲದಲ್ಲಿ ತೇಲುತಿದ್ದರು. ಅರಣ್ಯಮಲ್ಲನು ಒಂದು ಎತ್ತರವಾದ ಪ್ರದೇಶದಲ್ಲಿ, ಚಿತ್ರ ಕೆತ್ತನೆಗಳಿಂದ ಭವ್ಯವಾಗಿ ಕಾಣಿಸುವ ಒಂದು ಕಲ್ಲಿನ ಸಿಂಹಾಸನದ ಮೇಲೆ ಕುಳಿತುಕೊಂಡು ಎಲ್ಲವನ್ನೂ ನೋಡಿ ಬಹಳ ಸಂತೋಷವಾಗಿದ್ದನು. ಅವನ ಮನಸ್ಸು ಇನ್ನು ಮುಂದೆ ಸಾಧಿಸಬೇಕಾದ ಕಾರ್ಯಗಳನ್ನು ಕುರಿತು ಯೋಚಿಸುತ್ತಿದ್ದಿತು.

ಅಂತಹ ಉತ್ಸಾಹದ ಸಮಯದಲ್ಲಿ ಇಬ್ಬರು ಖಡ್ಗಮೃಗೀಯ ಸೇವಕರು ತಮ್ಮ ವಾಹನಗಳ ಮೇಲೆ, ಒಂದೇ ಸಮನೆ ಓಡುತ್ತ ಆ ಪ್ರದೇಶಕ್ಕೆ ಬಂದು, ತಮ್ಮ ವಾಹನಗಳಿಂದ ಧುಮುಕಿ ಗುಂಪು ನಿಂತವರನ್ನು ದೂಡುತ್ತಾ, ಅವಸರವಸರವಾಗಿ ಅರಣ್ಯಮಲ್ಲನ ಕಡೆಗೆ ಸಾಗತೊಡಗಿದರು.

ಅರಣ್ಯಮಲ್ಲನಿಗೆ ಶಿಲಾಮುಖಿ ಎಂಬ ಮಂತ್ರಿ ಇದ್ದನು. ಅವನು ಅರಣ್ಯಮಲ್ಲನ ಕಡೆಗೆ ಧಾವಿಸುತ್ತಿರುವ ಆ ಇಬ್ಬರನ್ನು ನೋಡಿ, ತನ್ನ ಬಳಿಗೆ ಬರುವಂತೆ ಸನ್ನೆಮಾಡಿದನು. ಅವರೂ ಅವನ ಬಳಿಗೆ ಹೋಗಿ ತೇಕುತ್ತಾ ನಿಂತರು.

"ಏನು ಸಂಗತಿ? ಊರು ಸುಟ್ಟು ಹೋದ ಹಾಗೆ ಬಹಳ ಗಾಬರಿಯಾಗಿರುವಿರೇಕೆ? ಈ ಸಂತೋಷದ ಸಮಯದಲ್ಲಿ ರಾಜನ ಬಳಿಯಲ್ಲಿ ನಿಮಗೇನು

ಕೆಲಸ? ಮಂತ್ರಿಯಾದ ನನ್ನ ಹತ್ತಿರ ಹೇಳುವುದನ್ನು ಬಿಟ್ಟು, ಒಮ್ಮೆಲೇ ರಾಜನ ಬಳಿಗೆ ಹೋಗುವುದು ತಪ್ಪೆಂದು ಗೊತ್ತಿಲ್ಲವೆ?" ಎಂದು ಮಂತ್ರಿ ಕಣ್ಣು ತಿರುಗಿಸುತ್ತಾ ಕೇಳಿದನು.

ಮಂತ್ರಿ ಶಿಲಾಮುಖಿಯ ಮಾತು ಕೇಳಿ ಅವರಿಬ್ಬರೂ ಅವನಿಗೊಂದು ನಮಸ್ಕಾರ ಮಾಡಿ ಏನೂ ಹೇಳದೆ ಸುಮ್ಮನೆ ನಿಂತುಬಿಟ್ಟರು. "ಏನು ಸಮಾಚಾರ ಹೇಳಬಾರದೆ? ಅಷ್ಟು ಬೇಗ ಮೂಕರಾದಿರಾ?" ಎಂದ ಶಿಲಾಮುಖಿ.

ಮಂತ್ರಿಯ ಪ್ರಶ್ನೆಗಳನ್ನು ಕೇಳಿ ಬಂದವರಿಬ್ಬರೂ ತಮ್ಮ ತಮ್ಮ ಮುಖಗಳನ್ನೇ ನೋಡಿಕೊಂಡರು. ಅವರಲ್ಲಿ ಸ್ವಲ್ಪ ದೊಡ್ಡವನು ಕಂಠ ಸರಿಮಾಡಿಕೊಂಡು "ಅಯ್ಯಾ, ನಮ್ಮ ಬೆಟ್ಟದ ತೊರೆಯ ಪಕ್ಕದಲ್ಲಿರುವ ಬೆಳೆದು ನಿಂತ ಜೋಳದ ಹೊಲದ ಮೇಲೆ ಹೊಸಬರಾರೋ ಆಕ್ರಮಿಸಿದ್ದಾರೆ. ಜೋಳದ ಕದಿರುಗಳನ್ನು ತಮ್ಮಿಷ್ಟ ಪ್ರಕಾರ ಕೊಯಿದುಕೊಂಡು ಹೋಗುತ್ತಿದ್ದಾರೆ. ಅವರು ನಮಗೆ ತಿಳಿದ ಅಡವಿ ಜಾತಿಯವರ ಹಾಗೆ ಕಾಣುವುದಿಲ್ಲ. ಅವರೆಲ್ಲರ ತಲೆಯಲ್ಲಿ ದೊಡ್ಡ ದೊಡ್ಡ ಮುಂಡಾಸುಗಳಿವೆ. ಶರೀರವನ್ನೆಲ್ಲಾ ವಸ್ತ್ರಗಳಿಂದ ಮುಚ್ಚಿಕೊಂಡಿದ್ದಾರೆ. ಎಲ್ಲಕ್ಕಿಂತಲೂ ವಿಚಿತ್ರವೇನೆಂದರೆ, ನಮ್ಮ ಸುತ್ತುಮುತ್ತಲೆಲ್ಲಿಯೂ ಕಾಣದಿರುವ ವಿಚಿತ್ರವಾದ ಪ್ರಾಣಿಗಳ ಮೇಲೆ ಸಾಗಿ ಬಂದವರು. ಕೊಯ್ದ ಜೋಳದ ಕದಿರುಗಳನ್ನೆಲ್ಲಾ ಆ ಪ್ರಾಣಿಗಳ ಮೇಲೆಯೇ ಹೊರಿಸುತ್ತಾರೆ. ಅಂತಹ ಮನುಷ್ಯರನ್ನೂ, ಪ್ರಾಣಿಗಳನ್ನೂ ಈ ವರೆಗೂ ನಾವು ಕಂಡಿದ್ದಿಲ್ಲ" ಎಂದನು.

"ಹೊಸ ಬಗೆಯ ಪ್ರಾಣಿಗಳೆ! ಅವು ಹೇಗಿವೆ?" ಎಂದು ಮಂತ್ರಿ ಶಿಲಾಮುಖಿ ಕೇಳಿದ.

"ಅವು ಆನೆಯಷ್ಟು ಎತ್ತರವಾಗಿವೆ. ಕೊಂಬೆಗಳ ಹಾಗೆ ಸಪೂರವಾದ ಕಾಲುಗಳು. ಅವುಗಳ ಕುತ್ತಿಗೆಗಳು ಕೊಕ್ಕರೆಗಳ ಕುತ್ತಿಗೆಯಂತೆ ಬಾವು ತಿರುಗು



ವಂಥವು. ನಡುಬೆನ್ನಿನ ಮೇಲೆ ಎತ್ತರವಾದ ಗುತ್ತಗಳಿವೆ. ಮೂಗಿನ ಹೊಳ್ಳೆಗಳಿಗೆ ಮುಚ್ಚಳಗಳಿವೆ. ಬಲಿಷ್ಠವಾದ ಎಲುಬಿನ ಪ್ರಾಣಿಗಳು" ಎಂದ ಎರಡನೆಯವನು.

ಹೀಗೆ ಮಂತ್ರಿ ಅವರಿಬ್ಬರೊಂದಿಗೆ ಮಾತಾಡುತ್ತಿರುವಾಗ, ಅದೇನು ವಿಷಯವೆಂದು ತಿಳಿಯಲು ಮತ್ತೆ ಕೆಲಮಂದಿ ಖಡ್ಗಮೃಗೀಯರು ಅವರ ಸುತ್ತಲೂ ಗುಂಪು ಗೂಡಿದರು. ಆ ವಿಚಿತ್ರ ಪ್ರಾಣಿಯ ವರ್ಣನೆಯನ್ನು ಕೇಳಿ, ಒಬ್ಬರಿಂದೊಬ್ಬರಿಗೆ ಗುಸಗುಸನೆ ಹೇಳಿಕೊಂಡಾಗ, ಎಲ್ಲರಿಗೂ ತುಂಬ ಭಯವಾಯಿತು. ಕೆಲವರು ತಮ್ಮವರ ಗುಂಪಿನಕಡೆಗೆ ಓಡಿಹೋಗಿ, "ಯಾವುದೋ ವಿಚಿತ್ರ ಮೃಗಗಳ ಮೇಲೆ ಯಾವುದೋ ಒಂದು ಲೋಕದವರು ಬಂದಿದ್ದಾರಂತೆ. ನಮ್ಮ ಹೊಲದ ಪೈರನ್ನೆಲ್ಲಾ ಕೊಯಿದುಕೊಂಡು ಹೋಗುತ್ತಿದ್ದಾರಂತೆ" ಎಂದು ಕೂಗಾಡಿದರು. ಏನು ಮಾಡಬೇಕೆಂದು ಗೊತ್ತಾಗದೆ ಎಲ್ಲರಲ್ಲಿಯೂ ಗಾಬರಿಯ



ಗಾಳಿ ಬೀಸಿದ ಹಾಗಾಯಿತು. ಆನಂದದ ಕೋಲಾಹಲ ಮಂದಮಂದವಾಗುತ್ತಾ ಹೋಯಿತು.

ವಿನೋದ ನೋಡಿ ಆನಂದಿಸಲು ಬಂದ ಮಂದಿಯಲ್ಲಿ ಕಲಕಲರವವೆದ್ದಿತು. ಅದನ್ನು ನೋಡಿ ಅರಣ್ಯಮಲ್ಲ ರಾಜ ಸಿಂಹಾಸನದಿಂದ ಎದ್ದು "ಏನದು ಗಲಾಟೆ? ಏನಾಯಿತು? ಮಂತ್ರಿ ಶಿಲಾಮುಖಿ ಎಲ್ಲಿ?" ಎಂದು ಕೂಗಿ ಕೇಳಿದನು.

ಶಿಲಾಮುಖಿ ಈ ಸಮಾಚಾರ ತಂದವರಿಬ್ಬರನ್ನೂ ಅರಣ್ಯಮಲ್ಲನ ಬಳಿಗೆ ಕರೆದುಕೊಂಡು ಹೋಗಿ, ಅವರ ಮುಖಾಂತರವಾಗಿ, ಅವನಿಗೆ ಎಲ್ಲಾ ಸಂಗತಿಯನ್ನೂ ಶ್ರುತಪಡಿಸಿದನು.

"ನಾವು ಕಷ್ಟಪಟ್ಟು ಬೆಳೆಯಿಸಿದ ಪೈರನ್ನೆಲ್ಲಾ ಯಾರೋ ಕಳ್ಳರು ಬಂದು ಕದ್ದುಕೊಂಡು ಹೋಗುವುದನ್ನು ನೋಡಿ, ಅವರನ್ನು ಹಿಡಿಯಲು ಆಯುಧಗಳನ್ನು ತೆಗೆದುಕೊಂಡು ಹೋಗುವುದನ್ನು ಬಿಟ್ಟು, ವಿಚಿತ್ರ ಪ್ರಾಣಿಗಳನ್ನು ಕುರಿತು ಆಶ್ಚರ್ಯಪಡುವ ಸಮಯವೇ ಇದು? ಹೆಸರಿಗೆ ನಾನೊಬ್ಬ ರಾಜ, ನನಗೊಬ್ಬ ಮಂತ್ರಿ! ಆದರೆ ನಮ್ಮ ನಡತೆಗಳಿನ್ನೂ ಕಾಡಾಡಿಗಳ ಧೋರಣೆಯಲ್ಲೇ ಅಂಟಿಕೊಂಡಿವೆ. ಇದಕ್ಕೊಂದು ರಾಜ್ಯವೆಂಬ ಹೆಸರಾದರೂ ಏಕಿದೆಯೋ ಏನೋ! ಏನೋ ಒಂದು ಹೊಸತನ್ನು ನೋಡಿದ ಮಾತ್ರಕ್ಕೆ ಇಷ್ಟೊಂದು ಹೆದರಬೇಕೇಕೆ?" ಎಂದ ಅರಣ್ಯಮಲ್ಲ ಕೋಪದಿಂದ.

ಅವನ ಮಾತು ಕೇಳಿ ಶಿಲಾಮುಖಿ ಜನರ ಗುಂಪಿನ ಕಡೆಗೆ ತಿರುಗಿ ಗಟ್ಟಿಯಾಗಿ, "ನಿಲ್ಲಿಸಿರಿ. ನಿಮ್ಮ ವಿನೋದ ಕೂಟಗಳನ್ನು ಸಾಕುಮಾಡಿರಿ. ನಮ್ಮ ಹೊಲದಲ್ಲಿಯ ಪೈರನ್ನು ಕಳ್ಳರು ಕದ್ದುಕೊಂಡು ಹೋಗುತ್ತಿದ್ದಾರೆ. ಅವರನ್ನು ಹಿಡಿದು ಹೊಡೆದು ಹತಮಾಡಿ ನಮ್ಮ ಬೆಳೆಯನ್ನು ಉಳಿಸಿಕೊಳ್ಳಬೇಕು" ಎಂದು ಕೂಗಿ ಹೇಳಿದ.

ಆ ಕೂಡಲೇ ಅನೇಕ ಮಂದಿ ಖಡ್ಗಮೃಗೀಯರು, ಈಟಿ, ಕತ್ತಿ, ಕೊಡಲಿಗಳನ್ನು ತೆಗೆದುಕೊಂಡು ಆಕಡೆಗೆ ಹೊರಟರು. ಕೆಲವರು ಖಡ್ಗಮೃಗಗಳ ಮೇಲೆ ಸವಾರಿ ಮಾಡಿದರು. ಮಂತ್ರಿ ಶಿಲಾಮುಖಿ ತನ್ನ ಖಡ್ಗಮೃಗವನ್ನು ತರಿಸಿ, ಅದರ ಮೇಲೆ ಕುಳಿತುಕೊಂಡು ಎಲ್ಲರಿಗಿಂತ ಮುಂದಾಗಿ ಹೊರಟನು. ಯಾವುದೋ ಹೊಸ ದೃಶ್ಯವನ್ನು ನೋಡುವ ಕುತೂಹಲವು ಅವರನ್ನು ಬೇಗಬೇಗನೆ ಸಾಗಿಸಿತು.

ರಾಜಾ ಅರಣ್ಯಮಲ್ಲನು ಅವರಿಗೆಲ್ಲ ಉತ್ಸಾಹ ಬರುವ ಹಾಗೆ, "ಆ ಕಳ್ಳರು ಏರಿಕೊಂಡು ಬಂದ ವಿಚಿತ್ರ ಪ್ರಾಣಿಗಳನ್ನು ನೋಡಿ ಯಾರೂ ಹೆದರಬೇಡಿ. ಲೋಕದಲ್ಲಿ ನಾವು ವಾಹನವನ್ನಾಗಿ ಮಾಡಿಕೊಂಡಿರುವ ಖಡ್ಗಮೃಗಗಳಿಗಿಂತ ಭಯಂಕರವಾದುವು ಬೇರೆ ಯಾವುದೂ ಇಲ್ಲ. ನಮ್ಮ ಪೈರುಗಳನ್ನು ರಕ್ಷಿಸಿ ಅವರನ್ನು ಸುಮ್ಮನೆ ಓಡಿಸಿಬಿಟ್ಟರೆ ಆಗಲಿಲ್ಲ. ಕೆಲವರನ್ನಾದರೂ ಸೆರೆಹಿಡಿದು ತರಬೇಕು. ಅವರ ಮೂಲಕವಾಗಿ ಅವರ ಗುಟ್ಟುಮುಟ್ಟುಗಳನ್ನು

ತಿಳಿಯಬೇಕು. ಹಾಗೆಯೇ ಅವರ ವಿಚಿತ್ರ ಮೃಗಗಳನ್ನೂ ಬಿಡಬಾರದು. ಬೇಗ ಹೋಗಿ ವಿಜಯಶಾಲಿಗಳಾಗಿ ಬನ್ನಿ" ಎಂದನು.

"ಅರಣ್ಯ ಮಾತೆಗೆ ಜೈ! ಅರಣ್ಯಮಲ್ಲ ಮಹಾರಾಜನಿಗೆ ಜೈ!" ಎಂದು ಘೋಷಿಸುತ್ತಾ ಅರಣ್ಯವಾಸಿಗಳು ಬೆಟ್ಟದ ತೊರೆಯ ಹೊಲಗಳ ಕಡೆಗೆ ಓಡತೊಡಗಿದರು.

ಅವರೆಲ್ಲ ತಮ್ಮ ಹೊಲಗಳ ಹತ್ತಿರ ಹೋದಾಗ. ಅಲ್ಲಿ ಅವರ ಕಣ್ಣಿಗೆ ಬಿದ್ದ ದೃಶ್ಯವು ಎಲ್ಲರನ್ನೂ ತತ್ತರಗುಟ್ಟಿಸಿತು. ಕಳ್ಳರ ಗುಂಪಿನಲ್ಲಿ ಇಪ್ಪತ್ತೈದು ಮೂವತ್ತು ಮಂದಿ ಇದ್ದರು. ಅವರಲ್ಲಿ ಕೆಲವರು ಜೋಳದ ಕದಿರು ಕೊಯ್ಯುತ್ತಿದ್ದರು. ಅವುಗಳನ್ನೆಲ್ಲ ದೊಡ್ಡ ದೊಡ್ಡ ಚೀಲಗಳಲ್ಲಿ ತುಂಬಿಸಿ ವಿಕಾರವಾಗಿರುವ ಅವರ ಮೃಗಗಳ ಮೇಲೆ ಹೇರುತ್ತಿದ್ದರು. ನಾಲ್ಕೈದು ಮಂದಿ ಕಳ್ಳರು ಈಟಿಗಳನ್ನು ಹಿಡಿದುಕೊಂಡು ಪಹರೆ ತಿರುಗುವವರಂತೆ ಸುತ್ತಲೂ ತಿರುಗಾಡಿಕೊಂಡಿದ್ದರು. ಆ ಕಳ್ಳರನ್ನೂ, ಅವರೊಂದಿಗಿರುವ ವಿಕೃತ ಮೃಗಗಳನ್ನೂ ನೋಡಿ, ಖಡ್ಗಮೃಗೀಯರ ವೇಗ ತಗ್ಗಿತು. ಅವರು ಎಷ್ಟು ಹೆದರಿದರೋ, ಅದಕ್ಕಿಂತಲೂ ಹೆಚ್ಚಾಗಿ ಖಡ್ಗಮೃಗಗಳ ಮೇಲೆ ಬಂದವರನ್ನು ನೋಡಿ ಆ ಕಳ್ಳರೂ ಹೆದರಿದರು. ಆದರೆ ಆ ಇಬ್ಬಗೆಯವರ ಹೆದರಿಕೆಯಲ್ಲಿ ವ್ಯತ್ಯಾಸವಿದ್ದಿತು.

ಕಳ್ಳರಲ್ಲೊಬ್ಬ ವಿಕೃತ ಮೃಗದ ಮೇಲೆ ಕುಳಿತುಕೊಂಡು, ಈಟಿಯನ್ನು ಮೇಲೆತ್ತಿ, ಕರ್ಕಶಕಂಠದಿಂದ, "ನೋಡಿ ನೋಡಿ! ಇಲ್ಲಿ ಬರುತ್ತಿರುವ ಕಾಡು ಜನರನ್ನು ನೋಡಿ! ಖಡ್ಗಮೃಗಗಳನ್ನು ಪಳಗಿಸಿ ತಮ್ಮ ವಾಹನಗಳನ್ನಾಗಿ ಮಾಡಿಕೊಂಡಿರುವ ಇವರು ಎಂಥಾ ಸಾಹಸಿಗರೋ!" ಎಂದನು.

ತಮ್ಮವನ ಕೂಗನ್ನು ಕೇಳಿದ ಕೂಡಲೇ ಜೋಳ ಕೊಯ್ಯುವ ಕೆಲಸದಲ್ಲಿದ್ದವರೆಲ್ಲಾ ತಲೆಯೆತ್ತಿ ನೋಡಿದರು. ಅವರಿಗೆ ಖಡ್ಗಮೃಗದ ಮೇಲೆ ಕುಳಿತುಕೊಂಡು ಮುಂದಿನಿಂದ ಬರುತ್ತಿರುವ ಶಿಲಾಮುಖಿಯೂ, ಅವನ ಹಿಂದೆ ಸಾಲುಸಾಲಾಗಿ ಬರುವ ಇತರರೂ ಕಾಣಿಸಿದರು. ಎಲ್ಲರಿಗಿಂತ ಹಿಂದೆ ನಡೆದು





ಬರುತ್ತಿರುವ ಕೆಲಮಂದಿ ಖಡ್ಗಮೃಗೀಯರು ಮುಂದೆ ಬರಲು ಅಂಜಿ ದೂರವೇ ನಿಂತು ಭೀತಿಯಿಂದ ಕಳ್ಳರ ಕಡೆಗೆ ನೋಡುತ್ತಿದ್ದರು.

ಕಳ್ಳರ ನಾಯಕನು ಬೇಗಬೇಗನೆ ತನ್ನ ವಿಕೃತ ಪ್ರಾಣಿಯ ಬೆನ್ನಮೇಲೇರಿ, ಖಡ್ಗಮೃಗೀಯರನ್ನು ಪರೀಕ್ಷಿಸುವವನಂತೆ ನೋಡಿದನು. ತಮ್ಮ ಮೇಲೆ ಬೀಳಲು ಅವರು ಹೆದರಿ ಹಿಂದೆ ಮುಂದೆ ನೋಡುತ್ತಿರುವರೆಂದು ಅವನಿಗೆ ಸಂದೇಹವಾಯಿತು. ಖಡ್ಗಮೃಗೀಯರಲ್ಲಿ ಒಬ್ಬನು ಕೂಡಾ ರಭಸದಿಂದ ಮುನ್ನುಗ್ಗುವವನಂತೆ ಕಾಣಿಸಲಿಲ್ಲ.

ಅವನು ತನ್ನವರ ಕಡೆಗೆ ತಿರುಗಿ, "ಉಷ್ಟ್ರವೀರರೇ, ನಾವೇನೂ ಹೆದರಬೇಕಾಗಿಲ್ಲ. ಈ ಖಡ್ಗಮೃಗ ವಾಹನದವರು ನಮ್ಮನ್ನು ನೋಡಿ ಹೆದರಿದ್ದಾರೆ. ಒಬ್ಬನಾದರೂ ನಮ್ಮನ್ನು ತಡೆಯಲು ಮುಂದೆ ಬರುವುದಿಲ್ಲ. ಏನೋ ಅಂದುಕೊಂಡರೆ, ನೋಡಲಿಕ್ಕೆ ಹೀಗಿದ್ದಾರೆಯೇ ಹೊರತು, ಅಂಜುಕುಳಿಗಳು. ಇದೇ ಸಮಯ. ಧೈರ್ಯ ಮಾಡಿ ನನ್ನ ಜತೆ ನಾಲ್ಕು ಮಂದಿ ಬನ್ನಿ. ಹೆದರಿದವರ ಮೇಲೆ ಕಪ್ಪೆ ಹಾರಿಸುವ ಹಾಗೆ ಅವರನ್ನು ಮುತ್ತಿ ಈಟಿಗಳಿಂದ ಓಡಿಸಿ ಬಿಡೋಣ" ಎಂದನು.

ನಾಯಕನ ಮಾತು ಕೇಳಿ ಅವನ ಕಡೆಯವರಿಗೆಲ್ಲ ಧೈರ್ಯ ಬಂತು. ಅವರಲ್ಲಿ ನಾಲ್ಕು ಮಂದಿ ಕಳ್ಳರು ತಮ್ಮ ವಾಹನಗಳ ಮೇಲೆ ಏರಿಕೊಂಡು ಈಟಿಗಳನ್ನು ಝಳಪಿಸುತ್ತ ಖಡ್ಗಮೃಗೀಯರ ಕಡೆಗೆ ನುಗ್ಗಿ ಬಂದರು. ಅದನ್ನು ನೋಡಿ ಮಂತ್ರಿ ಶಿಲಾಮುಖಿ ಹೆದರಿ ನಡುಗುತ್ತ, ತನ್ನವರ ಕಡೆಗೆ ತಿರುಗಿ, "ಈ ಕಳ್ಳರು ಅಷ್ಟೆತ್ತರವಾದ ಪ್ರಾಣಿಗಳ ಮೇಲೆ ಕುಳಿತುಕೊಂಡು ನಮ್ಮನ್ನು ಸುಲಭವಾಗಿ ಈಟಿಗಳಿಂದ ತಿವಿಯುತ್ತಾರೆ. ನಾವು ಅವರನ್ನು ಸಮೀಪಿಸಿದರೆ ಬದುಕಿ ಉಳಿಯುವಂತಿಲ್ಲ. ನಾವೆಲ್ಲ ಕೂಡಲೇ ಹಿಂದಿರುಗಿ ಸಮೀಪದಲ್ಲಿರುವ ಮರಗಳ ಗುಂಪಿಗೆ ಹೋಗೋಣ. ನಮ್ಮನ್ನು ಓಡಿಸಿಕೊಂಡು ಅವರೂ ಅಲ್ಲಿಗೆ ಬರುತ್ತಾರೆ. ಆಗ ಮರಗಳ ಮೇಲೇರಿಕೊಂಡು ಕೊಂಬೆಗಳ ಮೇಲಿನಿಂದಾಗಿ ಈಟಿಗಳಿಂದ ಅವರನ್ನು ತಿವಿಯಬಹುದು. ಹುಂ, ನಮ್ಮೊಂದಿಗೆ ಬಂದವರೆಲ್ಲಾ ಮರಗಳ ಮೇಲೆ ಏರಿರಿ!" ಎಂದು ಎಲ್ಲರಿಗೂ ಕೇಳಿಸುವಂತೆ ಕೂಗಿ ಹೇಳಿದನು.

ಶಿಲಾಮುಖಿಯು ಎಚ್ಚರಿಕೆ ಹೊರಡುವಾಗ, ಕಳ್ಳರು ಸಮೀಪಿಸಿಬಿಟ್ಟಿದ್ದರು. ಮಂತ್ರಿ ಹೇಳಿದ ಮಾತು ಎಲ್ಲರಿಗೂ ಕೇಳಿಸಲಿಲ್ಲ. ಇಬ್ಬರು ಖಡ್ಗಮೃಗೀಯರು ತಮ್ಮ ವಾಹನಗಳನ್ನು ಹಿಂದಕ್ಕೆ ತಿರುಗಿಸಿ ಕಾಲುನಡಿಗೆಯಲ್ಲಿ ಬಂದು ನಿಂತವರ ಬಳಿಗೆ ಹೋಗಿ "ನೀವೆಲ್ಲಾ ಮರದ ಮೇಲೆ ಹತ್ತಿ, ಆ ಕಳ್ಳರು ಇಲ್ಲಿಗೆ ಬಂದ ಕೂಡಲೇ ಈಟಿಗಳಿಂದ ತಿವಿಯಿರಿ!" ಎಂದು ಕೂಗಿದನು.

ಅದರಂತೆ ಖಡ್ಗಮೃಗೀಯರು ಕೆಲವರು ಬೇಗ ಬೇಗನೆ ಮರಗಳ ಮೇಲೆ ಏರತೊಡಗಿದರು. ಅವರ

ಉಪಾಯವನ್ನು ತಿಳಿದುಕೊಂಡ ಕಳ್ಳರ ನಾಯಕ, ತನ್ನವರನ್ನು ಕುರಿತು, "ಜೋಳ ಕೊಯ್ಯುವವರೆಲ್ಲಾ ಆ ಕೆಲಸಬಿಟ್ಟು ತಮ್ಮ ವಾಹನಗಳನ್ನೇರಿರಿ. ನಾನೂ ಮತ್ತೆ ಕೆಲವರೂ ಈ ಖಡ್ಗಮೃಗದವರ ಸಮಾಚಾರ ತೆಗೆದುಕೊಳ್ಳೋಣ. ಉಳಿದವರು ಮರ ಹತ್ತಿದವರನ್ನೆಲ್ಲಾ ಈಟಿಗಳಿಂದ ಕೆಳಗುರುಳಿಸಿರಿ" ಎಂದನು.

ಶಿಲಾಮುಖಿ ತನ್ನ ವಾಹನವನ್ನು ಹಿಂದಿರುಗಿಸುವುದರೊಳಗೇ, ಕಳ್ಳರ ನಾಯಕನು ತನ್ನ ಕೆಲ ಅನುಚರರೊಂದಿಗೆ ಬಂದು, ಅವನನ್ನೂ ಅವನೊಂದಿಗಿದ್ದ ಕೆಲವರನ್ನೂ ಮುತ್ತಿಬಿಟ್ಟನು. ಶಿಲಾಮುಖಿ ಧೈರ್ಯದಿಂದ ಕಳ್ಳರ ನಾಯಕನ ಈಟಿಯ ಹೊಡೆತವನ್ನು ತನ್ನ ಈಟಿಯಿಂದ ತಡೆದು ಪ್ರತಿಹೊಡೆತ ಕೊಡುತ್ತ "ಜೈ! ಅರಣ್ಯಮಾತೆ! ಎಲ್ಲರೂ ಮರಗಳಕಡೆಗೆ ಓಡಿರಿ! ಮೃಗಗಳನ್ನು ಅತ್ತ ತಿರುಗಿಸಿರಿ!" ಎಂದು ಕೂಗುತ್ತ ಹೋರಾಡ ತೊಡಗಿದನು.

ಖಡ್ಗಮೃಗೀಯರೆಲ್ಲರೂ ಒಂದೇ ಬಾಯಿಗೆ ಅರಣ್ಯಮಾತೆಗೆ ಜಯಜಯವೆನ್ನುತ್ತ, ವೇಗದಿಂದ ಮರಗಳ ಗುಂಪಿನ ಕಡೆಗೆ ಓಡಿದರು. ಶಿಲಾಮುಖಿ ಎಲ್ಲರಿಗಿಂತ ಹಿಂದೆ ಬಿದ್ದುಬಿಟ್ಟರೂ, ಕಳ್ಳರ ನಾಯಕನ ಪೆಟ್ಟಿನಿಂದ ತಪ್ಪಿಸಿಕೊಳ್ಳುತ್ತ, "ಮರದ ಮೇಲಿರುವವರು ಗುರಿಹಿಡಿದು ಈ ದುಷ್ಟರ ಎದೆ ಸೀಳಿಹೋಗುವ ಹಾಗೆ ಈಟಿಗಳನ್ನು ಗುರಿಹೊಡೆಯಿರಿ! ನಮ್ಮ ಈಟಿಗಳ ರುಚಿಯನ್ನು ಇವರು ಚೆನ್ನಾಗಿ ನೋಡಲಿ! ಹೆದರಬೇಡಿರಿ! ಜೈ "ಅರಣ್ಯಮಾತೆ!" ಎಂದು ಕೂಗಿದನು.

ಶಿಲಾಮುಖಿ ಕೂಡಾ ತನ್ನನ್ನು ಮುತ್ತಿದವರ ನಡುವಿನಿಂದ ಬಹುಕಷ್ಟಪಟ್ಟು ತಪ್ಪಿಸಿಕೊಂಡು, ತನ್ನ ಅನುಚರರೊಂದಿಗೆ ಮರಗಳ ಗುಂಪಿನಕಡೆಗೆ ನುಗ್ಗಿಬಿಟ್ಟನು. ಪರಿಸ್ಥಿತಿ ಕೈಮೀರಿ ಹೋದುದನ್ನು ನೋಡಿ ಶಿಲಾಮುಖಿ, "ಇನ್ನು ನಾವು ಈ ಕಳ್ಳರನ್ನು ಇದಿರಿಸಲಾರೆವು. ಅರಣ್ಯಪುರಕ್ಕೆ ಓಡುವುದೇ ಕ್ಷೇಮ" ಎಂದು ತನ್ನವರಿಗೆ ಹೇಳಿ, ತನ್ನ ವಾಹನವನ್ನು ಜೋರಾಗಿ ಓಡಿಸತೊಡಗಿದನು.

ಆ ಸಮಯದಲ್ಲಿ ಸಮೀಪದಲ್ಲಿದ್ದ ಒಂದು ಮರದ ಕೊಂಬೆಯಿಂದ, "ಮಹಾಮಂತ್ರಿ, ಶಿಲಾಮುಖೀ!



ಓಡಿಹೋಗಬೇಡ. ನಿನ್ನ ಖಡ್ಗಮೃಗವನ್ನು ಹಿಂದಕ್ಕೆ ತಿರುಗಿಸಿ, ಆದರಿಂದ ನಿನ್ನನ್ನು ಓಡಿಸಿಕೊಂಡು ಬರುವ ಒಂಟೆಯನ್ನು ಹಾಯಿಸು. ನಿನ್ನ ಖಡ್ಗಮೃಗದ ಕೊಂಬು ಇಂದ್ರನ ವಜ್ರಾಯುಧಕ್ಕಿಂತ ಕಡಮೆಯಾದುದಲ್ಲವೆಂದು ತಿಳಿ! ಹಿಂದಿರುಗು!" ಎಂಬ ಮಾತುಗಳು ಕೇಳಿಸಿದುವು.

ಧೈರ್ಯ ಕೊಡುವಂತಹ ಮಾತುಗಳನ್ನು ಹೇಳಿದವನಾರು? ಅದು ಶಿಲಾಮುಖಿಗೆ ಪರಿಚಯವಿದ್ದ ಸ್ವರವೇ! ಅವರ ರಾಜನಿಗೆ ಸಹಾಯ ಮಾಡಿದ ಕ್ಷತ್ರಿಯ ಯುವಕರೊಂದಿಗೆ ಸ್ವರ್ಣಾಚಾರಿ ಎಂಬವನೊಬ್ಬನಿದ್ದ. ಅವನದೇ ಈ ಸ್ವರವೆಂದು ಶಿಲಾಮುಖಿಗೆ ತಿಳಿಯಿತು. ಆದರೆ ನಿಂತು ಆ ಕಳ್ಳರನ್ನು ಇದಿರಿಸುವ ಧೈರ್ಯ ಅವನಲ್ಲಿ ಸ್ವಲ್ಪವೂ ಉಳಿದಿರಲಿಲ್ಲ. ಆದುದರಿಂದ ಅವನು ಆ ಎಚ್ಚರಿಕೆಯನ್ನು ಲಕ್ಷ್ಯಮಾಡದೆ, ತನ್ನ ಅನುಚರರ ಹಿಂದೆಯೇ ಅರಣ್ಯಪುರದ ಕಡೆಗೆ ಓಡುವುದನ್ನೇ ಮುಂದುವರಿಸಿದನು. ಈ ಬಗೆಯ ವರ್ತನೆಯಿಂದ ಖಡ್ಗಮೃಗೀಯರ ಮಂದಬುದ್ಧಿಯೂ ಪುಕ್ಕಲುತನವೂ ಇವರಿಗಿಂತ ಹೆಚ್ಚು ಬುದ್ಧಿವಂತರಾದ ಆ ಕಳ್ಳರಿಗೆ ಗೊತ್ತಾಯಿತು.

ಮರದ ಕೊಂಬೆಯಲ್ಲಿ ಅಡಗಿದ್ದ ಸ್ವರ್ಣಾಚಾರಿ ಕೂಗಿ ಹೇಳಿದ ಮಾತನ್ನು ಕಳ್ಳರ ನಾಯಕನೂ ಕೇಳಿದನು. ಅವನು ಬಹಳ ಕೋಪದಿಂದ ಸ್ವರ್ಣಾಚಾರಿ ಅಡಗಿರುವ ಮರದಡಿಗೆ ಬಂದು. "ಯಾರೆಲಾ ಅದು? ನನ್ನ ಶತ್ರುವಿಗೆ ಉಪಾಯ ಹೇಳಿಕೊಡುವವನೇ! ಬಾಯಿ ಮುಚ್ಚಿದರೆ ಬದುಕಿ ಉಳಿಯುವಿ! ಜಾಗ್ರತೆ! ನಾನು ಯಾರೆಂದು ಗೊತ್ತೇ ನಿನಗೆ?" ಎಂದು ಬೆದರಿಸುವವನಂತೆ ಕೇಳಿದನು.

"ನನ್ನ ಹೆಸರು ಸ್ವರ್ಣಾಚಾರಿ. ಪದ್ಮಪುರದ ವಾಸ್ತು ಶಿಲ್ಪಿ. ಹುಟ್ಟು ಅಂಜುಕುಳಿ ಪ್ರಾಣಿಯಾದ ಒಂಟೆಯನ್ನು ನೋಡಿ, ಮಹಾಪೌರುಷ ಪ್ರಾಣಿಯಾದ ಖಡ್ಗಮೃಗವು ಓಡಿಹೋಗುವುದನ್ನು ಸಹಿಸಲಾರದೆ, ಆ ಶಿಲಾಮುಖಿಗೆ ಹಾಗೆ ಹೇಳಿದೆ. ನನಗೆ ನಿಮ್ಮ ಒಂಟೆ ಜಾತಿಯವರೂ, ಖಡ್ಗಮೃಗದವರೂ ಎಲ್ಲಾ ಸಮಾನರೇ, ಮಿತ್ರರೇ. ಅವರೂ ನನ್ನ ಕಡೆಯವರಲ್ಲ, ನೀವೂ ಅಲ್ಲ. ಯಾರಿಗೂ ಹಿತಬೋಧೆ ಮಾಡುವುದು ನನ್ನ ಗುಣ, ಅಷ್ಟೇ" ಎಂದು ಸ್ವರ್ಣಾಚಾರಿ ಮರದ ಕೊಂಬೆಯಲ್ಲಿದ್ದೇ ಉತ್ತರ ಕೊಟ್ಟನು.

"ಓಹೊ! ಬಹಳ ಬುದ್ಧಿವಂತಿಕೆಯ ಮಾತುಗಳನ್ನಾಡುವಿ! ಈ ಶಕುನಿತನ ಬಿಟ್ಟು ಕೂಡಲೇ ಮರದಿಂದಿಳಿದು ಬರುವಿಯಾ? ನನ್ನ ಈಟಿಯ ಗುರಿಗೆ ಬಲಿಯಾಗುವಿಯಾ?" ಎಂದು ಕಳ್ಳರ ನಾಯಕನು, ಒಂಟೆಯ ಬೆನ್ನ ಮೇಲೆ ಎದ್ದು ನಿಂತು ಈಟಿಯನ್ನು ಮೇಲೆತ್ತಿದನು.

(ಇನ್ನೂ ಇದೆ)





# ಅದಲು ಬದಲು

ಹಟವೆಂಬುದು ಸಾಧಾರಣ ಅಭ್ಯಾಸದಂತಾಗಿ ಹೋದ ತ್ರಿವಿಕ್ರಮರಾಜನು ಮತ್ತೆ ಮರದಬಳಿಗೆ ಹಿಂದಿರುಗಿ. ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಭುಜದ ಮೇಲೆ ಹಾಕಿಕೊಂಡು. ಎಂದಿನಂತೆ ಮೌನವಾಗಿ ಶ್ಮಶಾನದ ಕಡೆಗೆ ನಡೆಯುತೊಡಗಿದನು. ಆಗ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, "ಎಲೈ ರಾಜನೆ, ನಿನ್ನ ದೃಢದೀಕ್ಷೆಯನ್ನು ನೋಡುವಾಗ ಒಂದುಕಡೆ ಅದ್ಭುತವೆಂದು ಕಾಣುತ್ತದೆ; ಆದರೆ ಕಡೆತನಕ ಇಂತಹ ದೃಢತ್ವ ನಿಂತೀತೆಂದು ಹೇಳಲು ಬರುವುದಿಲ್ಲ. ಅಕಸ್ಮಾತ್ ಸಡಿಲಿಹೋದೀತು ಎಂಬುದಕ್ಕೆ ಉದಾಹರಣೆಯಾಗಿ ಒಂದು ಕಥೆ ನೆನಪಿಗೆ ಬರುತ್ತದೆ. ದೇವರಲ್ಲಿ ದೃಢಭಕ್ತಿಯುಳ್ಳವನಾದ ವೀಣಾವಂತನೆಂಬುವನು ಒಂದೇ ಕ್ಷಣದೊಳಗೆ ನಾಸ್ತಿಕನಾಗಿ ಹೋದ. ಆ ಕಥೆಯನ್ನು ಹೇಳುತ್ತೇನೆ. ಕೇಳುತ್ತಾ ನಡೆ" ಎಂದು ಹೀಗೆ ಕಥೆಯನ್ನು ಪ್ರಾರಂಭಮಾಡಿತು :

ಕಳಿಂಗ ದೇಶದಲ್ಲಿ ವೀಣಾವಂತನು ವೈದ್ಯನೆಂದೇ ಪ್ರಸಿದ್ಧನಾಗಿದ್ದನು. ಅವನು ಎಷ್ಟೋ ರೋಗಿಗಳಿಗೆ ಅದ್ಭುತವಾದ ಚಿಕಿತ್ಸೆಗಳನ್ನು ಮಾಡಿ ಅಪರಧನ್ವಂತರಿ

ಎಂಬ ಹೆಸರು ಪಡೆದಿದ್ದನು. ಶಿವನ ಮೇಲೆ ಅಪರಿಮಿತ ಭಕ್ತಿ ಅವನಿಗಿತ್ತು. ಅವನು ಯಾವಾಗಲೂ ಶಿವಾಲಯದಲ್ಲಿಯೇ ಕುಳಿತಿರುತ್ತಿದ್ದನು. ಹಗಲಾದರೂ ಸರಿ, ರಾತ್ರಿಯಾದರೂ ಸರಿ ಅವನೊಂದಿಗೆ ಕೆಲಸವಿರುವವರು ಶಿವಾಲಯಕ್ಕೆ ಹೋದರೆ ಅವನು ತಪ್ಪದೆ ಅಲ್ಲಿ ಇದ್ದೇ ಇರುತ್ತಾನೆ.

ವೀಣಾವಂತನಿಗೆ ಮನೆಬಾಗಿಲುಗಳಿದ್ದುವು. ಹೆಂಡತಿ ಮಕ್ಕಳೂ ಇದ್ದರು. ಆದರೆ ಅವನು ಮನೆಗೆ ಹೋಗುವುದು ಯಾವಾಗಲೋ ಒಂದುದಿನ ನೆಂಟನ ಹಾಗೆ, ಅಷ್ಟೇ. ಸಂಸಾರ ತಾಪತ್ರಯಗಳನ್ನು ಅವನು ಒಂದಿಷ್ಟೂ ಹಚ್ಚಿಕೊಳ್ಳಲಿಲ್ಲ. ಒಂದು ಕಾಲದಲ್ಲಿ ಅವನು ಒಬ್ಬ ಧನಿಕನಿಗೆ ಚಿಕಿತ್ಸೆಮಾಡಿ, ಮೃತ್ಯುಮುಖದಿಂದ ಅವನನ್ನು ಉಳಿಸಿದ್ದನು. ಆ ಧನಿಕ ತನ್ನ ಕೃತಜ್ಞತೆಯ ಕಾಣಿಕೆಯಾಗಿ ತನ್ನ ಮಗಳು ಯಶೋಧರೆಯನ್ನು ಅವನಿಗೆ ಮದುವೆ ಮಾಡಿಕೊಟ್ಟು, ಅವರ ವಾಸಕ್ಕಾಗಿ ಒಂದು ಒಳ್ಳೆಯ ಮನೆ ಕೂಡಾ ಕಟ್ಟಿಸಿಕೊಟ್ಟನು.

ವೀಣಾವಂತನಿಗೆ ಹೆಂಡತಿಯ ಮೇಲೆ ಪ್ರೇಮವೇನೋ ಇದ್ದಿತು. ಮಕ್ಕಳ ಮೇಲೆಯೂ ಅವನಿಗೆ ಪ್ರೇಮವಿತ್ತು. ಆದರೆ ಸಂಸಾರವು ಬೆಳೆದರೂ, ಅವನ ಪ್ರವೃತ್ತಿ ಬದಲಾಯಿಸಲಿಲ್ಲ. ಅದೆಲ್ಲದಕ್ಕಿಂತ ಅವನ ಶಿವಭಕ್ತಿ ಉತ್ಕಟವಾದುದರಿಂದ, ಅವನು ಯಾವಾಗಲೂ ಶಿವಾಲಯದಲ್ಲಿಯೇ ಕುಳಿತಿರುತ್ತಿದ್ದನು. ಅಲ್ಲಿಯೇ ರೋಗಿಗಳನ್ನು ನೋಡುತ್ತಿದ್ದನು. ಅಲ್ಲಿಯೇ ಅವನಿಗೆ ಸಂಪಾದನೆಯೂ ಆಗುತ್ತಿತ್ತು. ಆದರೆ ಅಲ್ಲಿ ಅವನು ಸಂಪಾದಿಸಿದ ಹಣವು ಮನೆಯನ್ನು ತಲುಪುತ್ತಿರಲಿಲ್ಲ. ಶಿವಾಲಯದಲ್ಲಿ ಕಾಣಿಸಿದ ಬಡವರಾದ ಶಿವಭಕ್ತರಿಗೆ ಸೇರಿ ಹೋಗುತ್ತಿತ್ತು ಆ ಹಣ. ವೈದ್ಯಕೀಯದಿಂದ ಬಿಡುವಿಲ್ಲದೆ ಹೋಗುವುದರಿಂದ ಅನೇಕ ದಿನಗಳ ವರೆಗೆ ಅವನು ಮನೆಗೆ ಮುಖತೋರಿಸುತ್ತಲೂ ಇರಲಿಲ್ಲ. ಹಣಬೇಕೆಂದು ಹೆಂಡತಿ ಸಮಾಚಾರ ಕಳುಹಿಸಿದರೆ ತನ್ನಹತ್ತಿರ ಉಳಿದಿರುವ ಹಣವನ್ನು ಕೊಟ್ಟು ಕಳುಹಿಸುತ್ತಿದ್ದನು. ಅವನ ದೃಷ್ಟಿಯಲ್ಲಿ ಹೆಂಡತಿ ಮಕ್ಕಳು ಮುಖ್ಯವೆಂದು ಕಾಣಿಸಲೇ ಇಲ್ಲ.



ಯಶೋಧರೆ ಅಭಿಮಾನವತಿಯಾದ ಹೆಂಗುಸು. ಗಂಡನ ಸಹಾಯವಿಲ್ಲದೆ ತಾನೊಬ್ಬಳೇ ಸಂಸಾರವನ್ನೂ ಮಕ್ಕಳ ಸಂರಕ್ಷಣೆಯನ್ನೂ ನೋಡಿಕೊಳ್ಳುವುದರಲ್ಲಿ ಬೇಸತ್ತಳು. ಅದರಿಂದುಂಟಾದ ಒಂದುಬಗೆಯ ವೈರಾಗ್ಯದಿಂದ, ಒಂದು ದಿನ ಅವಳು ತನ್ನ ಮನೆಯನ್ನು ಯಶೋವಂತನೆಂಬ ಧನಿಕನಿಗೆ ಮಾರಿ ಮಕ್ಕಳನ್ನು ಕರೆದುಕೊಂಡು ತೌರುಮನೆಗೆ ಹೋಗಿಬಿಟ್ಟಳು. ಆಶ್ಚರ್ಯವೇನೆಂದರೆ, ತನ್ನಹೆಂಡತಿಯ ಈ ಕೆಲಸವನ್ನು ತಿಳಿದಾಗ ವೀಣಾವಂತನಿಗೆ ಇರುವೆ ಕಚ್ಚಿದಂತೆ ಕೂಡಾ ಆಗಲಿಲ್ಲ.

ಯಶೋಧರೆಯಿಂದ ಮನೆಯನ್ನು ಕೊಂಡುಕೊಂಡ ಧನಿಕನು ಪರಮ ನಾಸ್ತಿಕ. ದೇವರ ಹೆಸರು ಕೇಳಿದರೆ ಅವನಿಗೆ ಕೋಪ ಬರುತ್ತಿತ್ತು. ಯಾವ ದೇವರಿಗೂ ನಮಸ್ಕಾರ ಮಾಡದೆ, ಪ್ರಾರ್ಥನೆ ಪೂಜೆಗೈಯದೆ ಕೋಟಿ ಧನ ಸಂಪಾದಿಸಿದ್ದ. ವೈದ್ಯಕೀಯದಲ್ಲಿ ವೀಣಾವಂತನ ಕೈರಾಶಿ ಎಂತಹುದೋ ವ್ಯಾಪಾರದಲ್ಲಿ ಯಶೋವಂತನ ಕೈರಾಶಿಯೂ ಅಂತಹುದೇ. ಅವನು ಮಣ್ಣು ಮುಟ್ಟಿದರೆ ಬಂಗಾರವಾಗುತ್ತಿತ್ತು. ದೇವರಿಗೆ ಕೈಮುಗಿಯದೆಯೇ ಧನಿಕನಾಗಿದ್ದ.

ಯಶೋವಂತನ ಇಬ್ಬರು ಹೆಂಡತಿಯರು ಸಂತಾನವಿಲ್ಲದೆ, ಒಬ್ಬಳ ತರುವಾಯ ಒಬ್ಬಳಂತೆ ತೀರಿಹೋದರು. ಆಮೇಲೆ ಮದುವೆಯಾದ ಅವನ ಮೂರನೇ ಹೆಂಡತಿ ಗರ್ಭವತಿಯಾದಳು. ಆಗ ಯಶೋವಂತನಿಗಾದ ಸಂತೋಷಕ್ಕೆ ಮೇರೆ ಇರಲಿಲ್ಲ. ತಾನು ಗರ್ಭವತಿಯಾದುದು ದೇವರ ಅನುಗ್ರಹದಿಂದಲೇ ಎಂದು ಹೆಂಡತಿ ಹೇಳಿದಾಗ, "ನೀನುಹಾಗೆ ನಂಬುವುದಾದರೆ ನಂಬಿಕೋ; ಅದು ನಿನ್ನ ಇಷ್ಟ. ಆದರೆ ನಾನುಮಾತ್ರ ದೇವರುದಿಂಡರ ದಯವನ್ನು ನಂಬುವುದಿಲ್ಲ." ಎಂದನು.

ಯಶೋವಂತನ ಹೆಂಡತಿ ಒಂಬತ್ತು ತಿಂಗಳು ತುಂಬಿದ ಮೇಲೆ ಗಂಡುಮಗುವನ್ನು ಹೆತ್ತಳು. ಆದರೆ ಅದು ಮಗುವಲ್ಲ. ಶವ! ಚರ್ಮ ಮುಚ್ಚಿದ ಎಲುವು ಗೂಡು. ಆ ಮಗುವಿನಲ್ಲಿ ಚಲನವಿರಲಿಲ್ಲ. ಆದರೆ ಅದರ ಎದೆಗುಂಡಿಗೆ ಮಾತ್ರ ಹೊಡೆದುಕೊಳ್ಳುತ್ತಿತ್ತು.





ಆದುದರಿಂದ ವೈದ್ಯರೇನಾದರೂ ಮಾಡುವರೇನೋ ?

"ಈ ಮಗುವನ್ನು ವೀಣಾವಂತನು ಬದುಕಿಸಿದರೆ ಬದುಕಿಸಬೇಕು. ಬೇರೊಬ್ಬನಿಂದ ಸಾಧ್ಯವಿಲ್ಲ" ಎಂದರು ಯಶೋವಂತನ ಬಂಧುಗಳು.

ವೀಣಾವಂತನ ಮೇಲೆ ಯಶೋವಂತನಿಗೆ ಬಹಳ ಹೀನವಾದ ಅಭಿಪ್ರಾಯವಿದ್ದಿತು. ಅವನೊಬ್ಬ ದೈವ ಮೂಢ. ಸಂಸಾರವನ್ನು ನೋಡಿಕೊಳ್ಳಲಾರದ ಅಸಮರ್ಥ. ಆದರೆ, ಬೇರೆ ಉಪಾಯವಿಲ್ಲದುದರಿಂದ. ತನಗೆ ಹುಟ್ಟಿದ ಒಬ್ಬನೇ ಒಬ್ಬ ಮಗ ಕೈಗೆ ಸಿಗುವನೋ ಎಂಬ ಆಶೆಯಿಂದ. "ಹಾಗಾದರೆ ಅವನನ್ನು ಕರೆದುಕೊಂಡು ಬನ್ನಿ" ಎಂದು ತನ್ನವರೊಡನೆ ಹೇಳಿದನು.

ಅವನ ಕಡೆಯವರು ಶಿವಾಲಯಕ್ಕೆ ಹೋಗಿ, ವೀಣಾವಂತನೊಡನೆ ಸಂಗತಿಯನ್ನು ಹೇಳಿ, ಅವನನ್ನು ತಮ್ಮೊಂದಿಗೆ ಬರಬೇಕೆಂದು ಕೇಳಿಕೊಂಡರು.

"ಆ ನಾಸ್ತಿಕನ ಬಳಿಗೆ ನಾನು ಬರಲಾರೆ. ಅವನು ಬಂದು ಶಿವಲಿಂಗದ ಮುಂದೆ ಸಾಷ್ಟಾಂಗ ನಮಸ್ಕಾರ ಮಾಡಿ ಅಪರಾಧ ಹೇಳಿಕೊಂಡರೆ ಅವನ ಮಗುವಿಗೆ ಚಿಕಿತ್ಸೆ ಮಾಡುತ್ತೇನೆ. ಆಮೇಲಿನದೆಲ್ಲಾ ಪರಶಿವನ ದಯೆ ಇದ್ದಂತಾಗುತ್ತೆ. ಈ ಮಾತನ್ನೇ ಅವನಿಗೆ ಹೇಳಿರಿ" ಎಂದ ವೀಣಾವಂತ.

ಯಶೋವಂತನು ತನ್ನ ಮಗುವನ್ನು ತೆಗೆದುಕೊಂಡು ಶಿವಾಲಯಕ್ಕೆ ಹೋಗಿ, ಮಗುವನ್ನು ವೀಣಾವಂತನ ಮುಂದೆ ಇಟ್ಟು, ಶಿವಲಿಂಗದ ಮುಂದೆ ಸಾಷ್ಟಾಂಗ ನಮಸ್ಕಾರಮಾಡಿ ಎದ್ದು, ಅಪರಾಧ ಕ್ಷಮಿಸುವಂತೆ ಕೇಳಿ, ಗಲ್ಲ ಬಡಿದುಕೊಂಡನು. ಅವನು ಇದನ್ನೆಲ್ಲಾ ಮಾಡಿದ್ದು ವೀಣಾವಂತನ ತೃಪ್ತಿಗಾಗಿಯೇ ಹೊರತು, ದೇವರ ಮೇಲೆ ನಂಬಿಗೆ ಬಂದುದರಿಂದೇನಲ್ಲ.

ವೀಣಾವಂತನು ತನ್ನ ಔಷಧ ಸಂಚಿಯಿಂದ ಯಾವುದೋ ಒಂದು ಗುಳಿಗೆಯನ್ನು ತೆಗೆದು, ಯಾವುದೋ ರಸದಿಂದ ತೇದು ಮಗುವಿನ ಬಾಯಿಯೊಳಗೆ ಸವರಿದನು. ಕೂಡಲೇ ಮಗು ಕೈಗಳನ್ನೂ, ಕಾಲುಗಳನ್ನೂ ಆಡಿಸುತ್ತ, ಕಿವ್ವನೆ ಅಳಲು ತೊಡಗಿತು. ಈ ವಿಚಿತ್ರವನ್ನು ನೋಡಿದವರೆಲ್ಲಾ ಆಶ್ಚರ್ಯದಿಂದ ಭಕ್ತಿಮೂಕರಾದರು. ಯಶೋವಂತನಲ್ಲಿಯೂ ದೇವರ ವಿಶ್ವಾಸ ಪುಟಿಯಿತು. ಅದೇ ಹೊತ್ತಿನಲ್ಲಿ ವೀಣಾವಂತನ ಹೆಂಡತಿ ಯಶೋಧರೆ ಅಳುತ್ತಾ, ತನ್ನ ಕೊನೆಯ ಶಿಶುವನ್ನು ಎತ್ತಿಕೊಂಡು ಬಂದು, "ನನ್ನ ಮಗುವನ್ನು ಕಾಪಾಡಿ!" ಎನ್ನುತಾ ಸ್ಮೃತಿಯಿಲ್ಲದಿರುವ ಮಗುವನ್ನು ತನ್ನ ಗಂಡನ ಮುಂದೆ ಇಟ್ಟಳು.

ವೀಣಾವಂತನು ಮಗುವಿನ ನಾಡಿಯನ್ನು ಪರೀಕ್ಷಿಸಿ, ಒಂದು ಮಾತ್ರೆಯನ್ನು ತೇದಿ ಮಗುವಿನ ಬಾಯಿಯಲ್ಲಿ ಸವರಿದನು. ಆ ಮಗು ಒಂದು ಸಾರಿ ಕಣ್ಣು ತೆರೆದು ತಾಯಿಯ ಮುಖನೋಡಿ, ಬಾಯಿತೆರೆದು ಪ್ರಾಣಬಿಟ್ಟು, ಶಾಶ್ವತವಾಗಿ ಕಣ್ಣುಮುಚ್ಚಿತು. ಕೂಡಲೇ ಯಶೋವಂತನು ಆ ಮಗುವನ್ನೆತ್ತಿ

ಕೊಂಡು ಶಿವಲಿಂಗದ ಮುಂದಿಟ್ಟು ಈ ಮಗುವಿನ ಪ್ರಾಣವನ್ನು ಕಾಪಾಡುವಂತೆ ಬೇಡಿಕೊಂಡನು. ಅವನು ಎಷ್ಟು ಕೂಗಿ ಬೇಡಿಕೊಂಡರೂ ಸತ್ತು ಹೋದ ಮಗು ಬದುಕಲಿಲ್ಲ.

ವೀಣಾವಂತನು ತನ್ನ ಔಷಧ ಸಂಚಿಯನ್ನು ಆ ಶಿವಲಿಂಗದ ಮೇಲೆ ಬೀಸಿ ಒಗೆದು ಎತ್ತಲೋ ಹೊರಟುಹೋದನು. ಆಮೇಲೆ ಅವನು ಆ ದೇವಾಲಯದ ಆವರಣದೊಳಗೆ ಕಾಲಿಡಲಿಲ್ಲ. ಅನೇಕ ತಿಂಗಳ ತರುವಾಯ ಒಂದು ಉತ್ಸವದ ದಿನ. ಅಲ್ಲಿಯ ದೇವರ ಮೆರವಣಿಗೆ ನಡೆಯುತ್ತಿದ್ದಾಗ ಅವನು ದೇವರ ವಿಗ್ರಹದಮೇಲೆ ಕಲ್ಲುಬಿಸುಟನು. ಅವನಿಗೆ ಹುಚ್ಚು ಹಿಡಿಯಿತೆಂದು ಎಲ್ಲರೂ ಅಂದುಕೊಂಡರು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಪರಮ ಭಕ್ತನಾದ ವೀಣಾವಂತನು ಇದ್ದಕ್ಕಿದ್ದಹಾಗೆ ನಾಸ್ತಿಕನಾಗಲಿಕ್ಕೂ, ಪರಮ ನಾಸ್ತಿಕನಾದ ಯಶೋವಂತನಿಗೆ ದೇವರಲ್ಲಿ ವಿಶ್ವಾಸ ಉಂಟಾಗಲಿಕ್ಕೂ ಕಾರಣವೇನು? ಮನುಷ್ಯರು ದೇವರನ್ನು ನಂಬುವುದು ಕೇವಲ ಸ್ವಾರ್ಥಕ್ಕೋಸ್ಕರವೇ ಏನ್ನ ಬೇಕೆ? ಈ ಪ್ರಶ್ನೆಗೆ ಸಮಾಧಾನ ತಿಳಿದೂಕೂಡಾ ಹೇಳದಹೋದರೆ ನಿನ್ನ ತಲೆಯೊಡೆದು ಚೂರುಚೂರಾಗುತ್ತದೆಂದು ತಿಳಿ!" ಎಂದು ಹೆದರಿಸಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದ: "ಮನುಷ್ಯನು ಸ್ವಾರ್ಥವಿಲ್ಲದೆ ಯಾವುದನ್ನೂ ನಂಬುವುದಿಲ್ಲ. ಯಶೋವಂತನು ತನ್ನ ಮಗ ಬದುಕಿದುದನ್ನು ಕಂಡ ಸಂತೋಷದಲ್ಲಿ ದೇವರ ಭಕ್ತನಾದ. ಅಂತಹ ಸ್ವಾರ್ಥದಿಂದಲೇ ವೀಣಾವಂತನೂ ಸಹ ದೇವರನ್ನು ನಂಬಿಕೊಂಡಿದ್ದ. ಅವನಿಗೆ ತನ್ನ ವೈದ್ಯದಮೇಲೆ ಎಂದಿಗೂ ನಂಬುಗೆ ಇರಲಿಲ್ಲ. ತಾನು ನಿಮಿತ್ತಮಾತ್ರನಾಗಿದ್ದು, ಚಿಕಿತ್ಸೆ ಮಾಡುತ್ತಿರುವಾಗ, ಶಿವಾನುಗ್ರಹದಿಂದ ರೋಗಿಗಳಿಗೆ ಗುಣವಾಗುತ್ತದೆಂದು ಅವನು ಭ್ರಮಿಸಿಕೊಂಡಿದ್ದುದೇ ಅವನ ತಪ್ಪಾಗಿತ್ತು. ಇಂತಹ ಸ್ವಾರ್ಥದ ಆಧಾರವಿದ್ದುದರಿಂದಲೇ ತನ್ನ ಮಗನು ಸತ್ತುಹೋದಾಗ ಆ ನಂಬುಗೆಯೂ ಹೊರಟುಹೋಯಿತು. ತನ್ನ ಮಗನು ಬದುಕದೆ ಹೋಗಲು ಕಾರಣ ತಾನು ಸರಿಯಾದ ಚಿಕಿತ್ಸೆ ಮಾಡದಿರುವುದೇ ಎಂದು ತಿಳಿದುಕೊಳ್ಳದೆ, ತಪ್ಪನ್ನು ದೇವರ ಮೇಲೆ ದೂಡಿಬಿಟ್ಟ. ಹೀಗೆ ದೇವರನ್ನು ತನ್ನ ವೈದ್ಯಕ್ಕೆ ಅಡ್ಡವಿಟ್ಟುಕೊಂಡು ಮೂಢನಾದುದರಿಂದ, ಕಡೆಗೆ ಅವನು ಹುಚ್ಚನಾಗಿ, ಲೋಕಕ್ಕೆ ವೈದ್ಯನಾಗಿ ತಾನು ಮಾಡತಕ್ಕ ಸೇವೆಗಳನ್ನೆಲ್ಲಾ ನೀರಿನ ಪಾಲುಮಾಡಿಬಿಟ್ಟನು."

ಈ ವಿಧವಾಗಿ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದಕೊಂಬೆಗೆ ನೇತು ಹಾಕಿಕೊಂಡಿತು.



# "ಊರ್ಧ್ವ ಲೋಕಪ್ರಾಪ್ತಿ"

ತ್ರಿಲೋಕ ಸಂಚಾರಿಯಾದ ನಾರದನು ಭೂಮಿಯಲ್ಲೊಂದು ಸ್ಮಶಾನದ ಬದಿಯಲ್ಲಿ ಹೋಗುವಾಗ ಒಂದು ತಲೆಬುರುಡೆ ಕಂಡಿತು. ತನ್ನ ತಂದೆ ಬ್ರಹ್ಮನ ಬರೆಹ ಓದಬಲ್ಲ ನಾರದ, ಆ ಬುರುಡೆಯ ಹಣೆಯಲ್ಲಿರುವ, "ಊರ್ಧ್ವ ಲೋಕಪ್ರಾಪ್ತಿ" ಎಂಬ ಬರೆಹವನ್ನು ಓದಿದನು.

ನಾರದನು ದಿವ್ಯ ದೃಷ್ಟಿಯಿಂದ ನೋಡಲು ಆ ಬುರುಡೆ ಒಬ್ಬ ಶತದರಿದ್ರನದೆಂದು ತಿಳಿಯಿತು. ಜೀವನದುದ್ದಕ್ಕೂ ದರಿದ್ರನಾಗಿದ್ದ ಆವನು ದಾನಧರ್ಮ ಯಾವುದೂ ಮಾಡಲಿಲ್ಲ. ಯಾವ ಪುಣ್ಯಕಾರ್ಯವನ್ನೂ ಮಾಡದಿರುವ ಇವನಿಗೆ ಊರ್ಧ್ವ ಲೋಕ ಹೇಗೆ ಬಂದೀತು? ಬ್ರಹ್ಮನು ಏಕೆ ಇಂತಹ ತಪ್ಪು ಬರೆದ?

ಈ ಸಂಗತಿ ತಿಳಿಯಲು ನಾರದನು ಆ ಬುರುಡೆಯೊಂದಿಗೆ ಬ್ರಹ್ಮಲೋಕಕ್ಕೆ ಹೋಗಿ "ತಂದೆಯೇ, ಯಾವ ಪುಣ್ಯಕಾರ್ಯವನ್ನೂ ಮಾಡದ ಈ ಗರ್ಭದರಿದ್ರದವನ ತಲೆಯಲ್ಲಿ ಊರ್ಧ್ವ ಲೋಕಪ್ರಾಪ್ತಿ ಎಂಬ ಸುಳ್ಳನ್ನು ಏತಕ್ಕೆ ಬರೆದಿರಿ?" ಎಂದು ಕೇಳಿದ.

"ಸುಳ್ಳು ಹೇಗಾಗುತ್ತದಪ್ಪ? ಅವನ ಈ ತಲೆಬುರುಡೆಯನ್ನು ನೀನೇ ಎತ್ತಿಕೊಂಡು ಇಲ್ಲಿಗೆ ತಂದೆಯಲ್ಲವೆ?" ಎಂದ ಬ್ರಹ್ಮ.





# ಮಹಾಶಿಲ್ಪಿ

ಸಾವಿರಾರು ವರ್ಷಗಳ ಹಿಂದೆ ಒಂದು ಹಳ್ಳಿಯಲ್ಲಿ ಒಬ್ಬ ಮಹಾಶಿಲ್ಪಿ ವಾಸವಾಗಿದ್ದನು. ಅವನ ಕೈವರಿಸೆಗಳ ಮೇಲೆ ಎಷ್ಟೋ ಚಿತ್ರವಿಚಿತ್ರವಾದ ಭವನಗಳೂ, ಸಭಾ ಮಂಟಪಗಳೂ, ದೇವಾಲಯಗಳೂ, ಕಂಗೊಳಿಸುತ್ತ, ಅವನನ್ನು ಮಹಾಶಿಲ್ಪಿಯನ್ನಾಗಿ ಮಾಡಿದ್ದುವು. ಅವನ ಖ್ಯಾತಿ ದೇಶದೇಶಗಳಲ್ಲಿ ಕೂಡಾ ವ್ಯಾಪಿಸಿದ್ದಿತು.

ಆ ಕಾಲದಲ್ಲಿ ನಾಗಲೋಕದಲ್ಲಿ ನಾಗರಾಜನ ಭವ್ಯ ಭವನವು, ಆಗಾಗ ಬರುವ ಭೂಕಂಪಗಳಿಂದಾಗಿ ಒಡಕು ಬೀಳುತ್ತಲೇ ಇದ್ದಿತು. ಹಾಗೆ ಒಡಕುಗಳು ಬಾರದಂತಹ ಹೊಸ ಭವನವನ್ನು ಕಟ್ಟಿಸಲು ಭೂಲೋಕದಲ್ಲಿರುವ ಮಹಾಶಿಲ್ಪಿಯನ್ನು ಕರೆಯಿಸಬೇಕೆಂದು ನಾಗರಾಜನು ನಿಶ್ಚಯಮಾಡಿದನು.

ನಾಗರಾಜನು ಮಹಾಶಿಲ್ಪಿಗೆ ಸಮಾಚಾರ ಕಳುಹಿಸಿದ ಕೂಡಲೇ ಶಿಲ್ಪಿಗೆ ಅತ್ಯಂತ ಸಂತೋಷವಾಯಿತು. ನಾಗಲೋಕದಲ್ಲಿ ಕೂಡಾ ತನ್ನ ಕರಾಮತಿಯಿಂದ ಭಾರಿ ಭವನ ನಿರ್ಮಿಸುವ ಅವಕಾಶವನ್ನು ಬಿಟ್ಟುಕೊಡದೆ, ನಾಗಲೋಕಕ್ಕೆ ಹೋದನು.

ಅಲ್ಲಿ ಬೇಗದಲ್ಲಿಯೇ ನಾಗರಾಜನಿಗೂ ಶಿಲ್ಪಿಗೂ ಗಾಢವಾದ ಸ್ನೇಹ ಉಂಟಾಯಿತು. ನಾಗರಾಜನ ಕುಟುಂಬವೂ ಪರಿವಾರವೂ ಅವನಿಗೆ ಆಪ್ತರಾದರು. ಅವನಿಗೆ ಅನ್ನಪಾನ ಉಪಚಾರಾದಿ ಸೌಕರ್ಯಗಳಿಗೆ ಯಾವ ಕೊರತೆಯೂ ಇರಲಿಲ್ಲ. ಆದರೂ ಶಿಲ್ಪಿಗೆ ಆಗಾಗ ತನ್ನ ಮನೆಯ ಕಡೆಗೆ ಗಮನ ಹರಿದುಕೊಂಡಿತ್ತು. ಅಪರಿಮಿತವಾದ ವೈಭವದ ನಡುವೆ ಇದ್ದು ಕೂಡಾ ಅವನು ತನ್ನ ಬಡ ಮನೆಯನ್ನು ಕುರಿತು, ತನ್ನ ತಾಯಿಯನ್ನೂ ಪತ್ನಿಯನ್ನೂ ಕುರಿತು ಯೋಚಿಸಲಾರಂಭಿಸಿದನು.

ಒಂದು ದಿನ ಶಿಲ್ಪಿ ನಾಗರಾಜನೊಂದಿಗೆ, "ರಾಜಾ, ನನಗೆ ಈ ನಡುವೆ ನನ್ನ ಮನೆಯ ನೆನಪು ಜಾಸ್ತಿಯಾಗಿಬಿಟ್ಟಿದೆ. ನಮ್ಮ ಊರಿನ ಪರಿಸ್ಥಿತಿಗಳನ್ನು ಸ್ವಲ್ಪ ನೋಡಿ ನನಗೆ ಹೇಳುವಿಯಾ ?" ಎಂದು ಕೇಳಿದನು.

"ಅದು ನನಗೆ ಗೊತ್ತೇಯಿದೆಯಪ್ಪ. ನಿಜವನ್ನು ಏಕೆ ಮುಚ್ಚಿಡಲಿ ? ನಿನ್ನ ಊರಿನ ಪ್ರಾಂತದಲ್ಲಿ ಈಗ್ಗೆ ಕೆಲಕಾಲದದಿಂದ ಮಳೆಯಿಲ್ಲ. ಆದುದರಿಂದ ಎಲ್ಲಾ ಒಣಗಿ ಅಲ್ಲಿ ಭಯಂಕರವಾದ ಕ್ಷಾಮ ತಲೆಹಾಕಿದೆ." ಎಂದ ನಾಗರಾಜ.

"ಹಾಗಾದರೆ ಅಲ್ಲಿ ಮಳೆಬೀಳುವ ಹಾಗೆ ಮಾಡಲಾರೆಯಾ ?" ಎಂದು ಕೇಳಿದ ಶಿಲ್ಪಿ.

ಜಿ. ದೇವಣ್ಣ



"ಅದು ಎಂದಿಗೂ ಸಾಧ್ಯವಿಲ್ಲ. ಹಾಗೆ ಮಳೆ ಬರಿಸುವುದು ನಿಯಮಕ್ಕೆ ವಿರುದ್ಧವಾಗುತ್ತದೆ. ಎಲ್ಲಿ ಯಾವಾಗ ಕ್ಷಾಮ ಬರಬೇಕೆಂಬುದೆಲ್ಲಾ ಮೊದಲೇ ನಿರ್ಣಯವಾಗಿರುವ ವಿಷಯ. ನಾನು ಅದಕ್ಕೇನೂ ಪ್ರತಿಮಾಡುವಂತಿಲ್ಲ. ಈ ಬರಗಾಲ ಇನ್ನೂ ತೊಂಬತ್ತೊಂಬತ್ತು ದಿನಗಳವರೆಗೆ ಇರುತ್ತದೆ. ಅನುಭವಿಸಬೇಕು" ಎಂದ ನಾಗರಾಜ.

ನಾಗರಾಜನ ಮಾತು ಕೇಳಿ ಶಿಲ್ಪಿಗೆ ನಡುಕ ಬಂದಿತು. ಅವನ ಮನಸ್ಸಿನೊಳಗೆ ತನ್ನ ಹಳ್ಳಿಯೂ, ತಾಯಿಯೂ, ಹೆಂಡತಿಯೂ, ಬಂಧುಗಳೂ, ಮಿತ್ರರೂ ತಿನ್ನಲಿಕ್ಕಿಲ್ಲದೆ ಹಸಿವೆಯಿಂದ ಹೊಟ್ಟೆ ಹಿಡಿದುಕೊಂಡು ಪರದಾಡುವಂತೆ ಕಾಣಿಸಿತು. ಅವರೆಲ್ಲ ಹಸಿವೆಯಿಂದ ಬೆಂದು, ನೀರಿಲ್ಲದೆ ಬಾಯೊಣಗಿ ಒಣ ಎಲೆಗಳನ್ನು ಕರಕುವಂತೆ, ಬೇರುಗಳನ್ನು ಜಗಿಯುವಂತೆ, ಕ್ರಮವಾಗಿ ಸಾಯುತ್ತಿರುವಂತೆ ಭಯಂಕರ ಚಿತ್ರ ಅವನ ಕಣ್ಣಿಗೆ ಕಟ್ಟಿತು.

"ನಿನ್ನನ್ನು ಬೇಡಿಕೊಳ್ಳುತ್ತೇನೆ, ನಾಗರಾಜಾ, ನನ್ನ ಹಳ್ಳಿಗೆ ಮಳೆಬೀಳುವಂತೆ ಮಾಡು. ಅವರೆಲ್ಲ ದಿಕ್ಕುಗೆಟ್ಟು ಸಾಯುವುದನ್ನು ಊಹಿಸಲಾರೆ!" ಎಂದ ಶಿಲ್ಪಿ ಉದ್ರೇಕದಿಂದ.

"ಮೂಢ ಮನುಷ್ಯನೆ, ಅವರ ಗೊಡವೆ ನಿನಗೇಕೆ? ನನ್ನ ಭವನ ನಿರ್ಮಾಣ ಪೂರ್ತಿಯಾದ ಕೂಡಲೇ ನಿನಗೆ ದೊಡ್ಡ ಬಹುಮಾನವನ್ನು ಕೊಡುತ್ತೇನೆ. ನಿನಗೆ ಅಂತ್ಯವಿಲ್ಲದಷ್ಟು ಮಣಿಗಳನ್ನೂ, ಬಂಗಾರವನ್ನೂ, ಬೆಳ್ಳಿಯನ್ನೂ ಕೊಡುತ್ತೇನೆ. ನೀನು ಬದುಕಿರುವಷ್ಟು ಕಾಲ ಮಹಾರಾಜನಾಗಿರಬಹುದು. ಚಿಂತಿಸಬೇಡ" ಎಂದ ನಾಗರಾಜ.

"ಬೇಡ, ಬೇಡ. ನನಗೆ ಮಳೆಯೇ ಬೇಕು. ನನ್ನ ಊರಿನವರಿಗೆಲ್ಲಾ ಮಳೆಯೇ ಬೇಕು. ನಿನ್ನ ಕಡೆಯವರೆಲ್ಲಾ ಪಟಪಟ ಬಿದ್ದು ಒಣಗಿ ಸಾಯುವುದನ್ನು ನೋಡುತ್ತ ನೀನು ಹೀಗೆ ನಿಶ್ಚಿಂತೆಯಿಂದ ಇರಬಲ್ಲೆಯಾ?" ಎಂದ ಶಿಲ್ಪಿ.

"ನನಗೆ ಅನಾವಶ್ಯಕ ಕೋಪಬರುವಂತೆ ಮಾಡಬೇಡ. ಈಗಂತೂ ಮಳೆ ಇಲ್ಲ. ಅದು ಅಷ್ಟೇ" ಎಂದು ನಾಗರಾಜ ಅಲ್ಲಿಂದ ಹೊರಟು ಹೋಗಿಬಿಟ್ಟ.

ಶಿಲ್ಪಿ ಹೊರಟು ಹೋಗಲಿಕ್ಕಾಗಿ ತನ್ನ ಸಲಕರಣೆಗಳನ್ನೆಲ್ಲ ಆರಿಸತೊಡಗಿದನು. ಈ ಸಂಗತಿ ತಿಳಿದು ನಾಗರಾಜನು ಶಿಲ್ಪಿಯ ಬಳಿಗೆ ಬಂದು, "ನಿಷ್ಕಾರಣವಾಗಿ ಏನಿದು ನಿನ್ನ ಹಟಮಾರಿತನ?" ಎಂದನು.

"ಇಲ್ಲ. ನಾಗರಾಜಾ, ನಾನು ನನ್ನ ಊರಿಗೆ ಹೋಗಿ, ಅಲ್ಲಿಯ ಪರಿಸ್ಥಿತಿ ಹೇಗಿದೆ ಎಂಬುದನ್ನು ನೋಡಲೇಬೇಕು" ಎಂದ ಶಿಲ್ಪಿ.

"ಯಾರಲ್ಲಿ? ಈ ದುಷ್ಟನನ್ನು ಬಂಧಿಸಿರಿ" ಎಂದು ನಾಗರಾಜನು ತನ್ನ ಸೇವಕರನ್ನು ಕರೆದನು. ಕ್ಷಣದೊಳಗೆ ನಾಗಸೇವಕರು ಬಂದು ಶಿಲ್ಪಿಯನ್ನು ಸುತ್ತಿಮುತ್ತಿ ಗಟ್ಟಿಯಾಗಿ ಹಿಡಿದುಕೊಂಡರು. "ಈಗ ಹೇಳು, ನಿನ್ನ ಪಾಡಿಗೆ ನನ್ನ ಭವನದ ಕೆಲಸ ಪೂರ್ತಿ

ಮಾಡುವಿಯೋ ಇಲ್ಲವೋ ?" ಎಂದ ನಾಗರಾಜ. "ನನ್ನ ಊರಿನಲ್ಲಿ ಮಳೆಬರಿಸುವಿಯೋ ಇಲ್ಲವೋ ?" ಎಂದು ಶಿಲ್ಪಿ ಇದಿರು ಪ್ರಶ್ನೆ ಹಾಕಿದ.

"ಸುರಿಸಲಾರೆನೆಂದು ಮೊದಲೇ ಹೇಳಿದ್ದೇನೆ" ಎಂದ ನಾಗರಾಜ.

"ಹಾಗಾದರೆ ನಾನು ನಿನ್ನ ಕೆಲಸ ಪೂರ್ತಿ ಮಾಡಲಾರೆ" ಎಂದ ಶಿಲ್ಪಿ.

"ಇವನನ್ನು ತೆಗೆದುಕೊಂಡು ಹೋಗಿ ತಲೆ—" ಎಂದು ನಾಗರಾಜನು ಮಾತು ನಿಲ್ಲಿಸಿದನು: ಶಿಲ್ಪಿಯ ತಲೆಯನ್ನು ಕಡಿಸಿಬಿಟ್ಟರೆ ತನ್ನ ಭವನದ ಕೆಲಸ ನಿಂತು ಹೋಗುತ್ತದೆಂದು ನಾಗರಾಜನಿಗೆ ನೆನಪುಬಂತು. ಕೂಡಲೇ ಅವನು, "ಶಿಲ್ಪಿಯನ್ನು ಬಿಟ್ಟುಬಿಡಿ" ಎಂದನು ನಿಟ್ಟುಸಿರು ಬಿಡುತ್ತಾ.

ಇದರಿಂದ ಶಿಲ್ಪಿಯ ಪರಿಸ್ಥಿತಿ ಉತ್ತಮವಾದುದೇನೂ ಇಲ್ಲ. ಅವನನ್ನು ನಾಗಲೋಕದಿಂದ ಹೋಗಲು ಬಿಡಲಿಲ್ಲ. ತನ್ನ ಊರು ಬರಗಾಲದಲ್ಲಿ ಸಿಕ್ಕಿಕೊಂಡಿದೆ. ಶಿಲ್ಪಿ ಒಂದುಕಡೆ ಕುಳಿತುಕೊಂಡು ಏನುಮಾಡುವುದೆಂದು ಆಲೋಚನೆ ಮಾಡುತ್ತಿರುವಾಗ ಅವನ ದೃಷ್ಟಿ ಒಂದು ಕಂಬದ ಮೇಲೆ ಬಿದ್ದಿತು.

ಶಿಲ್ಪಿ ಕೂಡಲೇ ಎದ್ದು ಆ ಕಂಬವನ್ನು ಗರಗಸದಿಂದ ಕೊಯ್ಯಲು ತೊಡಗಿದನು. ಆಗ ಇಡಿಯ ಭವನವೇ ಕಂಪಿಸತೊಡಗಿತು. ನಾಗರಾಜನು ಕೂಗುತ್ತಾ ಓಡಿಬಂದು "ತಡೆ, ನಿಲ್ಲಿಸು. ನಿನಗೆ ಪುಣ್ಯಬರುತ್ತೆ, ನಿಲ್ಲಿಸು !" ಎಂದು ಅಂಗಲಾಚಿದನು.

"ಹಾಗಾದರೆ ನಮ್ಮೂರಿಗೆ ಮಳೆ ಬರಿಸುವಿಯಾ ?" ಎಂದು ಶಿಲ್ಪಿ ಕೇಳಿದ.

"ಬರಿಸುತ್ತೇನೆ, ಈಗಲೇ ಮಳೆ ಬರಿಸುತ್ತೇನೆ." ಎಂದ ನಾಗರಾಜ.

"ಬರಿಸುತ್ತೇನೆ ಅಂತ ಹೇಳಿ ನೆರೆಗಿರೆ ಬರಿಸಿ ಊರನ್ನು ಮುಳುಗಿಸಿಬಿಡಬೇಡ. ನಮ್ಮ ಗ್ರಾಮಕ್ಕೆ ಬೇಕಾದಷ್ಟು ಮಳೆ ಮಾತ್ರ ಸಾವಕಾಶವಾಗಿ




ಬರಬೇಕು. ನೆನಪಿಟ್ಟುಕೋ ನಾಗರಾಜಾ !" ಎಂದ ಶಿಲ್ಪಿ. "ನಿನ್ನ ಕೋರಿಕೆಯಂತೆಯೇ ಮಾಡುತ್ತೇನೆ. ಸಂದೇಹಿಸಬೇಡಪ್ಪಾ" ಎಂದು ನಾಗರಾಜ ನಮ್ರತೆಯಿಂದಲೇ ಹೇಳಿದ. ಹಾಗೆ ಹೇಳದೆ ಬೇರೆ ಉಪಾಯವಿರಲಿಲ್ಲ. ಶಿಲ್ಪಿ ಹಟಕ್ಕೆ ಬಿದ್ದಿದ್ದಾನೆ. ಭವನವನ್ನು ಕಟ್ಟಬಲ್ಲವನಿಗೆ ಭವನವನ್ನು ಕೆಡಹುವುದು ಬ್ರಹ್ಮವಿದ್ಯೆಯೇನಲ್ಲ.

"ನೀನು ನಮ್ಮ ಗ್ರಾಮಗಳಲ್ಲಿ ಮಳೆ ಬೀಳಿಸಿದರೆ ಸಾಕು. ನಿನ್ನ ಭವನವನ್ನು ನೋಡಿ ಸ್ವರ್ಗಲೋಕದ ದೇವೇಂದ್ರನು ಅಸೂಯೆಪಡುವ ಹಾಗೆ ನಿರ್ಮಿಸುತ್ತೇನೆ" ಎಂದ ಶಿಲ್ಪಿ.

ನಾಗರಾಜನು ಶಿಲ್ಪಿಯ ಶರೀರದ ಮೇಲೆ ತನ್ನ ಅಂಗವಸ್ತ್ರವನ್ನು ಹೊದೆಯಿಸಿ, "ನೀನು ನಿನ್ನ ಊರಿಗೆ ಹೋಗಿ, ಅಲ್ಲಿ ಮಳೆ ಬೀಳುವ ರೀತಿಯನ್ನು ಕಣ್ಣಾರೆ ನೋಡಿ ಬಾ" ಎಂದನು. ಶಿಲ್ಪಿ ಭೂಲೋಕಕ್ಕೆ ಬಂದನು. ಅವನು ತನ್ನ

ಪ್ರಾಂತದಲ್ಲಿ ಜಿರಿಜಿರಿ ಮಳೆ ಸುರಿಯುವುದನ್ನೂ, ಗ್ರಾಮಸ್ಥರೆಲ್ಲಾ ಆನಂದಪರವಶರಾಗಿ ನಲಿಯುತ್ತ ಅಟ್ಟಹಾಸ ಮಾಡುವುದನ್ನೂ ಕಂಡನು. ಆದರೆ ಜನರಾರೂ ಅವನನ್ನು ನೋಡಲಿಲ್ಲ. ಅವರಿಗೆ ಕಾಣ ಸಿದ್ದು ಒಂದು ಮಹಾಸರ್ಪ.

"ಅಬ್ಬೋ! ಎಷ್ಟು ದೊಡ್ಡ ಸರ್ಪ!" ಎಂದು ಗ್ರಾಮಸ್ಥರು ಆಶ್ಚರ್ಯಪಟ್ಟರು.

"ಈ ಸರ್ಪವೇ ಮಳೆ ಬರುವ ಹಾಗೆ ಮಾಡಿದೆ. ಇದಕ್ಕೊಂದು ಆಲಯ ಕಟ್ಟಿಸೋಣ" ಎಂದರು ಕೆಲವರು. ಅದರಂತೆ ಆಲಯದ ಕೆಲಸ ಬೇಗದಲ್ಲೇ ಪೂರ್ತಿಯಾಯಿತು. ಗ್ರಾಮಕ್ಕೆ ಬಂದ ಬರಗಾಲ ಕೂಡಾ ಹೊರಟು ಹೋಯಿತು.

ಶಿಲ್ಪಿ ನಾಗಲೋಕಕ್ಕೆ ಹಿಂದಿರುಗಿ ಹೋಗಿ ನಾಗರಾಜನೊಂದಿಗೆ, "ನನ್ನನ್ನು ಮೋಸ ಮಾಡಿ ನಾಗ ರೂಪದಲ್ಲಿ ಕಳುಹಿಸಿದೆ. ನನ್ನ ಕಡೆಯವರೆಲ್ಲರನ್ನೂ ನೋಡಿದೆ. ಆದರೆ ಅವರೊಂದಿಗೆ ಮಾತಾಡಲಾರದೆ ಹೋದೆ" ಎಂದನು.

"ನೀನೊಬ್ಬ ದೊಡ್ಡ ಹಟಗಾರನೆಂದು ತಿಳಿದ ಮೇಲೆ ನನ್ನ ಜಾಗ್ರುತೆಯಲ್ಲಿ ನಾನಿರಬೇಕಾಯಿತು. ಸರಿ, ಇನ್ನು ನಿನ್ನ ಕೆಲಸವನ್ನು ಪೂರ್ತಿ ಮಾಡಿಬಿಡು" ಎಂದ ನಾಗರಾಜ. ಶಿಲ್ಪಿ ಈಗ ತುಂಬ ಪ್ರಸನ್ನನಾಗಿದ್ದನು. ಅವನು ನಾಗರಾಜನ ಭವನವನ್ನು ತನ್ನ ಪೂರ್ಣ ಜಾಣ್ಮೆಯನ್ನು ಉಪಯೋಗಿಸಿ ಅದ್ಭುತವೆನಿಸುವಂತೆ ತಯಾರಿಸಿದನು. ಇಂದ್ರನು ಗೃಹಪ್ರವೇಶದ ಉತ್ಸವ ಸಮಯಕ್ಕೆ ಬಂದು, ಆ ಭವನವನ್ನು ನೋಡಿ ನಿಜವಾಗಿಯೂ ಅಸೂಯೆಪಟ್ಟನು.

ಕೆಲಸ ಪೂರ್ತಿಯಾದ ಕೂಡಲೇ ನಾಗರಾಜನು ಮಹಾಶಿಲ್ಪಿಗೆ ಅಪರಿಮಿತವಾಗಿ ಬಹುಮಾನಗಳನ್ನು ಕೊಟ್ಟು ಮನೆಗೆ ಹಿಂದಿರುಗಿಸಿದನು. ಅಕಸ್ಮಾತ್ತಾಗಿ ಅವನನ್ನು ನೋಡಿದ ಪರಿಚಿತರು, "ಇಷ್ಟು ಕಾಲ ಎಲ್ಲಿದ್ದೆ? ಏನಾದೆ? ನೀನಿಲ್ಲದಿರುವಾಗ ಇಲ್ಲೆಲ್ಲಾ ಎಷ್ಟು ಭಯಂಕರವಾದ ಬರಗಾಲ ಬಂತು ಗೊತ್ತೆ? ಯಾವುದೋ ಒಂದು ದೇವತಾ ಸರ್ಪ ಬಂದು ಮಳೆ ಬರುವ ಹಾಗೆ ಮಾಡಿತು. ಅದಕ್ಕೊಂದು ಆಲಯವನ್ನೂ ಕಟ್ಟಿಸಿದೆವು. ಸ್ವಲ್ಪ ಹೊತ್ತಿನ ಮೇಲೆ ಆ ದೇವತಾ ಸರ್ಪ ಎಲ್ಲಿ ಹೋಯಿತೋ ಏನೋ?" ಎಂದು ಹೇಳಿದನು.

"ನಾನೇ ಆ ಸರ್ಪ" ಎಂದ ಶಿಲ್ಪಿ. ಮೊದಮೊದಲು ಯಾರೂ ಅವನ ಮಾತನ್ನು ನಂಬಲಿಲ್ಲ. ಅವನು ಎಲ್ಲರೊಂದಿಗೂ ತನ್ನ ಅನುಭವಗಳನ್ನು ಹೇಳಿದನು. ಆಗ ಜನರು ಅವನ ಮಾತನ್ನು ನಂಬಿದುದಷ್ಟೇ ಅಲ್ಲದೆ, ಅವನು ಊರಿಗೆ ಮಾಡಿದ ಉಪಕಾರಕ್ಕಾಗಿ ಅಭಿಮಾನ ಪಟ್ಟರು. ಅನಂತರ ಆ ಊರಿಗೆ "ಸರ್ಪಪುರ" ಎಂಬ ಹೆಸರು ಬಂತು.





# ಹುಚ್ಚರಾಜ

ಹಿಂದೆ ಒಂದು ಕಾಲದಲ್ಲಿ ಗೌಡದೇಶವನ್ನು ದೇವವರ್ಮನೆಂಬ ರಾಜನು ಪಾಲಿಸಿಕೊಂಡಿದ್ದನು. ಅವನು ಪರಂಪರೆಯಿಂದ ರಾಜನಾಗಿ ಬಂದರೂ, ಅವನ ಬುದ್ಧಿ ಸರಿಯಾಗಿರಲಿಲ್ಲ. ಜನರೆಲ್ಲ ಅವನನ್ನು ಹುಚ್ಚ ರಾಜನೆಂದು ಹೇಳುತ್ತಿದ್ದರು. ಆದರೆ ಪ್ರಜೆಗಳ ಪುಣ್ಯದಿಂದ ದೇವವರ್ಮನಿಗೆ ಒಳ್ಳೆಯ ಬುದ್ಧಿವಂತಿಕೆಯುಳ್ಳ ಮಂತ್ರಿ ಇದ್ದನು. ರಾಜನ ತಲೆಯಲ್ಲಿ ಆಗಾಗ ಬರುವ ಹುಚ್ಚು ಆಲೋಚನೆಗಳಿಗೆ, ಮಂತ್ರಿ ಉಪಾಯದಿಂದ ಪ್ರತೀಕಾರ ಮಾಡುತ್ತಿದ್ದನು.

ಹೀಗಿರುವಾಗ ದೇವವರ್ಮನ ದರ್ಶನಕ್ಕಾಗಿ ಒಬ್ಬ ಠಕ್ಕ ಸಾಧು ಬಂದನು. ನರಿಬುದ್ಧಿಯ ಆ ಕಳ್ಳ ಸಾಧು, ರಾಜನ ಬುದ್ಧಿ ಎಂತಹುದೆಂಬುದನ್ನು ತಿಳಿದಿಟ್ಟುಕೊಂಡು, "ಮಹಾರಾಜರೆ, ತಾವು ಯಾವುದೋ ಒಂದು ನೆರವೇರಲಾಗದ ಕೋರಿಕೆಯನ್ನಿಟ್ಟುಕೊಂಡು, ಚಿಂತಿಸುತ್ತಿರುವಂತೆ ಕಾಣುತ್ತದೆ. ಅದನ್ನು ತಿಳಿಸಿದರೆ, ನನ್ನ ತಪಸ್ಸಿನ ಶಕ್ತಿಯಿಂದ ನಿಮ್ಮ ಕೋರಿಕೆ ತೀರಿಸಿಬಿಡಬಹುದು" ಎಂದನು.

ಕೂಡಲೇ ದೇವವರ್ಮ, "ಯೋಗಿ ಪುಂಗವಾ, ಸರಿಯಾಗಿ ಕಂಡುಹಿಡಿದಿರಿ. ನಾನು ಎಷ್ಟೋ ಚಕ್ರವರ್ತಿಗಳ ಕಥೆಗಳನ್ನು ಕೇಳಿದ್ದೇನೆ. ನಾನು ಚಕ್ರವರ್ತಿಯಾಗಿ ಹುಟ್ಟಿ ಘನವಾದ ಜೀವನವನ್ನು ಕಾಣಬೇಕೆಂದು ಬಹಳ ಕಾಲದಿಂದ ಚಿಂತಿಸಿಕೊಂಡಿದ್ದೇನೆ. ಅದಕ್ಕಾಗಿ ನಿಮ್ಮಿಂದ ಏನು ಸಹಾಯ ಮಾಡಲು ಸಾಧ್ಯವಾದೀತು?" ಎಂದು ನಿಟ್ಟುಸಿರುಬಿಟ್ಟನು.

ಕಪಟಸಾಧು ಸ್ವಲ್ಪ ಆಲೋಚನೆ ಮಾಡಿದ ಹಾಗೆ ನಟಿಸಿ, "ಇಂತಹ ಕೋರಿಕೆ ಸುಮ್ಮನೆ ನಿಮ್ಮ ಮನಸ್ಸಿನಲ್ಲಿ ಬರುವುದಿಲ್ಲ. ತಮ್ಮ ಜಾತಕವನ್ನು ಒಂದು ಸಾರಿ ತೋರಿಸಿರಿ, ಹೇಳುತ್ತೇನೆ" ಎಂದನು.

ಅದರಂತೆ ಸಾಧು ಜಾತಕವನ್ನು ನೋಡಿ, "ಅರರೆ, ಇಪ್ಪತ್ತು ವರ್ಷಗಳ ಕೆಳಗೆ ತಮ್ಮ ಚಕ್ರವರ್ತಿಯಾಗುವ ಯೋಗ ಕೂದಲಿನಷ್ಟು ವ್ಯತ್ಯಾಸದಲ್ಲಿ ತಪ್ಪಿತ್ತು. ಆಗ ಒಂದು ಗ್ರಹಶಾಂತಿ ಮಾಡಿಸಿದ್ದರೆ ಚಕ್ರವರ್ತಿಯೋಗ ಸಿದ್ಧಿಸುತಿತ್ತು. ಈಗಲಾದರೂ ಮೀರಿ ಹೋದುದೇನಿಲ್ಲ. ಇನ್ನೊಂದು ಇಪ್ಪತ್ತು ವರ್ಷ ಕಳೆದರೆ ನೀವು ತಪ್ಪದೆ ಚಕ್ರವರ್ತಿಯಾಗುವಿರಿ" ಎಂದನು. ಹುಚ್ಚ ರಾಜನು ಇದರಿಂದ ಅತ್ಯಾನಂದಗೊಂಡು ಕಳ್ಳ ಸಾಧುವಿಗೆ ಕೇಳಿದಷ್ಟು ಹಣ ಕೊಟ್ಟು ಕಳುಹಿಸಿದನು. ಅಂದಿನಿಂದ ಆ ರಾಜನಿಗೆ ಚಕ್ರವರ್ತಿಯಾಗ

ಎಚ್. ವಿ. ಸುಬ್ಬರಾವ್

ಬೇಕೆಂಬ ಇಚ್ಛೆ ಪ್ರಬಲವಾಗುತ್ತಾ ಹೋಯಿತು. ಇಪ್ಪತ್ತು ವರ್ಷ ತಾಳುವ ಮಾತು ಬಹಳ ಬಾಧೆಯಾಗಿ ತೋರಿತು. ಆ ಬಾಧೆಯನ್ನು ತಾಳಲಾಗದೆ ತನ್ನ ಆಸ್ಥಾನ ಜೋತಿಷ್ಕರನ್ನು ಕರೆದು, "ನಾಳಿನಿಂದ ಪಂಚಾಂಗವನ್ನು ಇಪ್ಪತ್ತು ವರ್ಷ ಮುಂದಕ್ಕೆ ತಳ್ಳಿಬಿಡಿ. ತಿಥಿ, ವಾರ, ನಕ್ಷತ್ರಗಳನ್ನೂ ತಳ್ಳಿ, ನಾಳೆಯೇ ಹೊಸ ಪಂಚಾಂಗ ತಯಾರಿಸಿಬಿಡಿ" ಎಂದನು.

ಈ ಆಜ್ಞೆಯನ್ನು ಕೇಳಿ ಆಸ್ಥಾನ ಜೋತಿಷ್ಕರು, ಬೆರಗಾಗಿ ಏನೂ ತೋರದೆ, ಮಂತ್ರಿಯೊಂದಿಗೆ ತಮಗೆ ಬಂದ ಕಷ್ಟವನ್ನು ಹೇಳಿದರು. ಮಂತ್ರಿ ಅವರಿಗೆ ಧೈರ್ಯ ಹೇಳಿ, ರಾಜನ ಬಳಿಗೆ ಹೋಗಿ, "ತಾವು ಪಂಚಾಂಗವನ್ನು ಇಪ್ಪತ್ತು ವರ್ಷ ಮುಂದಕ್ಕೆ ತಳ್ಳಲು ಹೇಳಿದ್ದೀರಿ. ಹಾಗೆ ಮಾಡಲು ಕಷ್ಟವೇನೂ ಇಲ್ಲ. ಆದರೆ ಅದರಿಂದ ಉಂಟಾಗುವ ತೊಂದರೆಗಳನ್ನು ತಾವು ಆಲೋಚಿಸಿರುವಂತೆ ಕಾಣುವುದಿಲ್ಲ" ಎಂದನು.

"ಏನು ತೊಂದರೆಗಳು? ಹೇಗೆ ಬರುತ್ತವೆ?" ಎಂದು ರಾಜನು ಕೇಳಿದ.

"ತಮಗೆ ಈಗ ನಲುವತ್ತನೇ ವಯಸ್ಸು. ಈ ಪ್ರಕಾರವಾದರೆ ತಾವು ನಾಳೆಯೇ ಅರುವತ್ತು ವಯಸ್ಸಿನವರಾಗುವಿರಿ. ಯುವ ರಾಜರಿಗೆ ಇಪ್ಪತ್ತೈದು ವಯಸ್ಸು ಬರುತ್ತದೆ. ಅವರನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ತಾವು ವಾನಪ್ರಸ್ಥಕ್ಕೆ ಹೋಗಬೇಕಾಗಿ ಬರುತ್ತದೆ. ಅದು ತಮಗೆ ಒಪ್ಪಿಗೆಯಾಗಬಹುದಾದರೆ ಸರಿ" ಎಂದ ಮಂತ್ರಿ.

ರಾಜನು ಅಪ್ರತಿಭನಾಗಿ, "ಅಂದ ಹಾಗೆ ಅದು ದೊಡ್ಡ ತೊಂದರೆಯೇ ಹೌದು. ಹಾಗಾದರೆ ಒಂದು ಕೆಲಸ ಮಾಡೋಣ; ಪಂಚಾಂಗವನ್ನು ಇಪ್ಪತ್ತು ವರ್ಷ ಹಿಂದಕ್ಕೆ ತಳ್ಳಿಸಿಬಿಡುವ. ಗ್ರಹಶಾಂತಿ ಮಾಡಿ ನಾನು ಕೂಡಲೇ ಚಕ್ರವರ್ತಿಯ ಯೋಗವನ್ನು ಹೊಂದಬಹುದು" ಎಂದನು.

"ಅದರಲ್ಲಿ ಇನ್ನೂ ಹೆಚ್ಚು ತೊಂದರೆಗಳಿವೆಯಲ್ಲಾ! ಇಪ್ಪತ್ತುವರ್ಷಗಳ ಕೆಳಗೆ ತಮಗೆ ಸಿಂಹಾಸನದ ಅರ್ಹತೆಯೇ ಬಂದಿರಲಿಲ್ಲ. ದೊಡ್ಡ ರಾಜರು ಒಳ್ಳೆಯ ನಡುವಯಸ್ಸಿನಲ್ಲಿದ್ದರು. ಪಂಚಾಂಗವನ್ನು ಹಿಂದಕ್ಕೆ ದೂಡಿ ಅವರು ಸಿಂಹಾಸನವನ್ನು ಬಿಟ್ಟು ಕೊಡಬೇಕಲ್ಲಾ? ಕೊಡುವರೇ?" ಎಂದ ಮಂತ್ರಿ.

ರಾಜನು ಹೆದರಿ, "ಬೇಡ, ಬೇಡ!" ಎಂದನು. ಕೂಡಲೇ ರಾಜನು ಜ್ಯೋತಿಷ್ಕರನ್ನು ಕರೆಯಿಸಿ, "ನಿಮ್ಮಲ್ಲಿ ಯಾರಾದರೂ ಪಂಚಾಂಗವನ್ನು ಹಿಂದಕ್ಕಾಗಲೀ, ಮುಂದಕ್ಕಾಗಲೀ ತಳ್ಳಬೇಡಿರಿ! ಎಚ್ಚರ! ಹಾಗೇನಾದರೂ ತಳ್ಳಿದ ಸುದ್ದಿ ಗೊತ್ತಾದರೆ ನಿಮ್ಮ ತಲೆಗಳನ್ನು ತೆಗೆದು ಕೋಟೆ ಬಾಗಿಲಿಗೆ ನೇತು ಹಾಕಿಸಿಯೇನು! ನೆನಪಿರಲಿ!" ಎಂದು ಎಚ್ಚರಿಕೆ ಹೇಳಿ ಕಳುಹಿಸಿದನು.






**ಪೂ**ರ್ವ ಕಾಲದಲ್ಲಿ ಉಜ್ಜಯಿನೀ ನಗರದಲ್ಲಿ ಸಾಗರ ದತ್ತನೆಂಬ ವರ್ತಕನಿದ್ದನು. ಅವನಿಗಿರುವ ಸಂಪತ್ತು ಎಷ್ಟೆಂಬುದಕ್ಕೆ ಎಲ್ಲೆಯಿರಲಿಲ್ಲ. ಅವನು ಒಂದು ಸಾರಿ ನೌಕಾ ವ್ಯಾಪಾರ ಮಾಡುತ್ತ ದೇಶ ವಿದೇಶಗಳಿಗೆ ಹೋಗುತ್ತಿದ್ದಾಗ, ನಡು ಸಮುದ್ರದಲ್ಲಿ ಇನ್ನೊಂದು ನೌಕೆಯನ್ನು ಸಂಧಿಸಿದನು. ಅದುಕೂಡಾ ಒಬ್ಬ ದೊಡ್ಡ ವರ್ತಕನ ನೌಕೆಯಾದುದರಿಂದ ಇಬ್ಬರೂ ಸರಿ ಸಮಾನತೆಯವರಾಗಿ ಮಾತಾಡಿದರು. ಆ ನೌಕೆಯ ಯಜಮಾನನು ರಾಜಗೃಹವೆಂಬ ದೇಶಕ್ಕೆ ಸೇರಿದ ಬುದ್ಧವರ್ಮನೆಂಬವನು.

ಸಾಗರದತ್ತನಿಗೂ ಬುದ್ಧವರ್ಮನಿಗೂ ಒಳ್ಳೆಯ ಸ್ನೇಹ ಉಂಟಾಯಿತು. ಆ ಸ್ನೇಹ ಎಷ್ಟು ಬಲವಾಯಿ ತೆಂದರೆ, ತಮ್ಮಿಬ್ಬರಲ್ಲಿ ಒಬ್ಬನಿಗೆ ಮಗನೂ ಇನ್ನೊಬ್ಬ ನಿಗೆ ಮಗಳೂ ಹುಟ್ಟಿದ ಪಕ್ಷದಲ್ಲಿ ಅವರಿಬ್ಬರೊಳಗೆ ಮದುವೆ ಮಾಡಿ, ತಾವು ಪರಸ್ಪರ ಬೀಗರಾಗಬೇಕೆಂದು ಇಬ್ಬರೂ ಅಂದುಕೊಂಡರು.

ಸಾಗರದತ್ತನು ವ್ಯಾಪಾರವನ್ನು ಮುಗಿಸಿ ಮನೆಗೆ ಹಿಂದಿರುಗಿಬಂದಾಗ, ಮಲ್ಲಿಗೆ ಹೂವಿನ ಮಾಲೆ ಹಾಕಿದ ಹಸುಮಗುವನ್ನು ತಂದು ಅವನ ಕೈಗೆ ಕೊಟ್ಟರು. ಮುದ್ದಾದ ಆ ಮಗುವನ್ನು ನೋಡಿ ಸಾಗರದತ್ತನು, "ಯಾರು ಈ ಮಲ್ಲಿಗೆ ?" ಎಂದು ಹೆಂಡತಿಯನ್ನು ಕೇಳಿದನು. ಅವಳು ನಾಚುತ್ತ "ನಿಮ್ಮ ಮಗಳೇ" ಎಂದಳು. ಸಾಗರದತ್ತನಿಗೆ ಸಂತೋಷವಾಯಿತು. ಮಗುವಿಗೆ ಮಲ್ಲಿಕಾ ಎಂಬ ಹೆಸರು ಖಾಯಂ ಆಯಿತು.

ತಾನು ಬುದ್ಧವರ್ಮನೆಂಬ ವರ್ತಕ ಮಿತ್ರನೊಂದಿಗೆ ಮಾಡಿಕೊಂಡ ಒಪ್ಪಂದವನ್ನು ಕುರಿತು ಸಾಗರದತ್ತನು ತನ್ನ ಹೆಂಡತಿಗೆ ಹೇಳಿದನು. ಈ ವಾರ್ತೆಯನ್ನು ಬುದ್ಧವರ್ಮನಿಗೂ ಕಳುಹಿಸಿಕೊಟ್ಟನು.

ಬುದ್ಧವರ್ಮನು ವ್ಯಾಪಾರಕ್ಕಾಗಿ ಮನೆಯಿಂದ ಹೊರಡುವಾಗಲೇ ಅವನ ಹೆಂಡತಿ ತಿಂಗಳು ತುಂಬಿದ ಗರ್ಭಿಣಿಯಾಗಿದ್ದಳು. ಆದುದರಿಂದ ಅವನು ಮನೆಗೆ ಹಿಂದಿರುಗಿದ ಕೂಡಲೇ ಹೆಂಡತಿಯನ್ನು ಕುರಿತು, "ಎಂಥಹ ಮಗು [illegible]ತೆಗೆ ?" ಎಂದು ಕೇಳಿದ. ಅವಳು ತಾನು [illegible] [illegible]ಗುವನ್ನು ತಂದು ಗಂಡನಿಗೆ ತೋರಿದ[illegible] ಅ[illegible]ಸೊಂದು ಎಲುವಿನ ಗುಂಪು ಗಳಿಂದಾದ [illegible]ದುರೂಪು; ಒಂದೇ ಕಣ್ಣು. ಇಷ್ಟು [illegible] [illegible]ಕ್ಕೊಂದು ಗೂನುಕೂಡಾ ಇತ್ತು.



"ಈ ಒಂಟಿಯನ್ನು ಏತಕ್ಕೆ ಹೆತ್ತೆ?" ಎಂದು ಬುದ್ಧವರ್ಮ ಹೆಂಡತಿಯ ಮೇಲೆ ಕೋಪಗೊಂಡನು. ತಂದೆಯ ಬಾಯಿಯಿಂದ ಹೊರಟ ಆ ಹೆಸರೇ ಶಾಶ್ವತವಾಗಿ, ಎಲ್ಲರೂ ಅವನನ್ನು ಓಷ್ಟನೆಂದೇ ಕರೆಯ ತೊಡಗಿದರು.

ಹೀಗಿರುವಾಗ ಸಾಗರದತ್ತನಿಗೆ ಮಗಳು ಹುಟ್ಟಿರುವ ಸಮಾಚಾರ ಬಂದಾಗ, ಬುದ್ಧವರ್ಮ ಮನಸ್ಸಿನಲ್ಲಿ ತಳಮಳಿಸುತ್ತ, ಸಮಾಚಾರ ತಂದವನಿಗೆ ಉಚಿತವಾದ ಸನ್ಮಾನಗಳನ್ನು ಮಾಡಿದನು. ಬಳಿಕ ತನ್ನ ಹೆಂಡತಿಯ ಹತ್ತಿರ, "ಈಗ ಏನಾಯಿತೆಂದು ನೋಡಿದೆಯಷ್ಟೆ? ಏನೆಂದು ನಾವು ಸಮಾಚಾರ ಕಳುಹಿಸಬೇಕು?" ಎಂದನು.

"ನೀವಾಗಿ ಕೇಳುವುದರಿಂದ ನನ್ನ ಆಲೋಚನೆ ಹೇಳುತ್ತೇನೆ. ವರ್ತಕ ವೃತ್ತಿಯಲ್ಲಿರುವವರು ತಮ್ಮ ಸ್ವಾರ್ಥಕ್ಕಾಗಿ ನಿಜವನ್ನೂ ಸುಳ್ಳನ್ನೂ ಸಮನ್ವಯ ಮಾಡಿಕೊಳ್ಳಬೇಕು. ನಮಗೆ ಮಗನು ಹುಟ್ಟಿರುವನೆಂದು ಸಮಾಚಾರ ಕಳುಹಿಸಿರಿ. ಇದರಲ್ಲಿ ಸುಳ್ಳು ಯಾವುದೂ ಇಲ್ಲವಷ್ಟೆ? ಮಗನದು ವರ್ಣನಾತೀತವಾದ ಆಕಾರವೆಂದು ಕೂಡಾ ಹೇಳಿಬಿಡಿ. ಅವನ ಸ್ವರೂಪ ಸ್ವಭಾವಗಳನ್ನು ನೋಡಿ ತಿಳಿದುಕೊಳ್ಳಬೇಕೇ ಹೊರತು, ವರ್ಣಿಸಲು ಸಾಧ್ಯವಿಲ್ಲವೆಂದೂ ಹೇಳಿರಿ. ಸಾಗರದತ್ತನ ಸಂಬಂಧವನ್ನು ಬಿಡುವುದು ಒಳ್ಳೆಯದಲ್ಲ. ಲಕ್ಷ್ಮಿಯನ್ನು ಒದೆಯಲೇ ಬಾರದು!" ಎಂದಳು ಬುದ್ಧವರ್ಮನ ಹೆಂಡತಿ.

ಅದರಂತೆ ಬುದ್ಧವರ್ಮನು, ತನ್ನ ಹೆಂಡತಿ ಹೇಳಿಕೊಟ್ಟ ಹಾಗೆಯೇ ಹೇಳಿ, ಸಾಗರವರ್ಮನ ದೂತನನ್ನು ದಾರಿಬತ್ತೆ ಕೊಟ್ಟು ಸಂತೋಷಪಡಿಸಿ ಹಿಂದಕ್ಕೆ ಕಳುಹಿಸಿದನು.

ಅನಂತರ ಎಂಟು ವರ್ಷಗಳವರೆಗೆ ರಾಜಗೃಹ ಉಜ್ಜಯಿನೀ ನಗರಗಳ ನಡುವೆ ಹೀಗೆಯೇ ಸ್ನೇಹ ರಾಯಭಾರಗಳು ನಡೆದುಕೊಂಡಿದ್ದುವು. ಕಡೆಗೊಮ್ಮೆ ಸಾಗರದತ್ತನು ಕಳುಹಿಸಿದ ದೂತನು ರಾಜಗೃಹಕ್ಕೆ ಬಂದು ಬುದ್ಧವರ್ಮನೊಂದಿಗೆ, "ಅಯ್ಯಾ, ಈಸಾರಿ ತಮ್ಮ ಕುಮಾರನನ್ನು ನೋಡಿ, ಆತನ ಗುಣರೂಪಗಳನ್ನು ತಿಳಿದುಕೊಳ್ಳದೆ ಬರಬೇಡವೆಂದು ಯಜಮಾನರು ಅಪ್ಪಣೆ ಮಾಡಿದ್ದಾರೆ" ಎಂದನು.

ಅದಕ್ಕೆ ಬುದ್ಧವರ್ಮ, "ಅರರೇ ಹೀಗೇನು? ಆದರೆ ನಮ್ಮ ಹುಡುಗ ತಾಮ್ರಲಿಪ್ತಿಯಲ್ಲಿ ಅವನ ಸೋದರಮಾವನ ಬಳಿಯಲ್ಲಿದ್ದು ಓದಿಕೊಳ್ಳುತ್ತಿದ್ದಾನೆ" ಎಂದು ಸುಳ್ಳು ಹೇಳಿದನು.

ಮತ್ತೊಂದು ನಾಲ್ಕುವರ್ಷ ಈ ನೆವನದಲ್ಲಿಯೇ ಸಾಗಿತು. ತರುವಾಯ ಮೂವರು ನಾಲ್ವರು ಮೇಲ್ಪರಗತಿಯ ಚತುರರು, ಸಾಗರದತ್ತನ ಪ್ರೇರಣೆಯಿಂದ ಬುದ್ಧವರ್ಮನ ಬಳಿಗೆ ಬಂದು, "ಅಯ್ಯಾ, ನಿಮ್ಮ ಪರಮ ಮಿತ್ರನಾದ ಸಾಗರದತ್ತ ಮತ್ತು ಅವರ ಪತ್ನಿ ಕೂಡಾ ತಮ್ಮೊಂದಿಗೆ ಹೀಗೆ ಹೇಳುವಂತೆ ಹೇಳಿದರು. ಈಗ ಹದಿಮೂರು ಹದಿನಾಲ್ಕು

ವರ್ಷಗಳು ಕಳೆದು ಹೋದರೂ, ನಮ್ಮ ಭಾವೀ ಅಳಿಯನು ಹೇಗಿರುವನೆಂಬ ಸಂಗತಿ ನಮಗೆ ತಿಳಿದು ಬರಲಿಲ್ಲ. ಸರಕನ್ನು ಅಡಗಿಸಿಟ್ಟು ಚೌಕಾಸಿ ಮಾಡು ವುದು ನ್ಯಾಯವಲ್ಲವೆಂಬುದು ನಿಮಗೆ ಗೊತ್ತಿದೆ ತಾನೇ. ನಿಮ್ಮ ಕುಮಾರನು ತಾಮ್ರಲಿಪ್ತಿಯಲ್ಲಿ ಇಷ್ಟು ಕಾಲದಿಂದ ಓದುತ್ತಿದ್ದಾನೆಂದರೆ ಅಸಂದರ್ಭ ವಾದ ಸಂಗತಿಯಾಗಿದೆ. ವೇದಾಧ್ಯಯನಕ್ಕೆ ಕೂಡಾ ಇಷ್ಟು ಕಾಲ ಬೇಕಾಗುವುದಿಲ್ಲ. ನಿಮ್ಮ ಉಳಿದ ಎಲ್ಲಾ ಜವಾಬ್ದಾರಿಗಳನ್ನೂ ಬಿಟ್ಟು, ಜೀವಮಾನ ಪೂರಾ ಅಧ್ಯಯನದಲ್ಲೇ ಇರುತ್ತಾನೆಂದರೆ ಅಸಾ ಧಾರಣ ಸಂಗತಿಯಾಗಿದೆ. ಆದುದರಿಂದ ಈ ಹಾಸ್ಯ ಗಳನ್ನು ಕಟ್ಟಿಟ್ಟು ನಿಮ್ಮ ಮನೆಯಲ್ಲಿಯಾದರೂ ಸರಿ, ತಾಮ್ರಲಿಪ್ತಿಯಲ್ಲಾದರೂ ಸರಿ ನಿಮ್ಮ ಕುಮಾರ ನನ್ನು ತೋರಿಸಿರಿ" ಎಂದರು.

"ಮಹಾನುಭಾವರೆ, ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಳ್ಳಿರಿ" ಎಂದು ಬುದ್ಧವರ್ಮ ಆ ದೂತ ರೊಂದಿಗೆ ಹೇಳಿ, ಹೆಂಡತಿಯ ಬಳಿಗೆ ಹೋಗಿ, "ಈಗ ಬಂದವರು ನಮ್ಮ ಮಗನನ್ನು ನೋಡಬೇಕೆಂದು ಪಟ್ಟು ಹಿಡಿದು ಕುಳಿತಿದ್ದಾರೆ. ಅವರಿಗೆ ನಮ್ಮ ಮಗನ ಗೊಗ್ಗೆ ಹಲ್ಲು, ಕುರುಡು ಕಣ್ಣು, ಗೂನು ಬೆನ್ನಿನ ರೂಪವನ್ನು ಹೇಗೆ ತೋರಿಸುವುದು? ಸಾಧ್ಯವೇ ಇಲ್ಲ. ಈಗ ಏನಾದರೂ ಬೇರೆ ಉಪಾಯ ವಿದ್ದರೆ ಬೇಗ ಹೇಳು" ಎಂದನು.

"ಉಪಾಯ ಎಂದೋ ಆಲೋಚಿಸಿಟ್ಟಿದ್ದೇನೆ" ಎಂದು ಹೇಳಿ ಬುದ್ಧವರ್ಮನ ಹೆಂಡತಿ ತನ್ನ ಆಲೋ ಚನೆಯನ್ನು ಗಂಡನ ಕಿವಿಯಲ್ಲಿ ಹೇಳಿದಳು.

ಬುದ್ಧವರ್ಮನು ಮಾಡುವ ದಾನಧರ್ಮ ಗಳಿಂದಲೇ ಬದುಕಿಕೊಂಡಿರುವ ಬ್ರಾಹ್ಮಣನೊಬ್ಬ ನಿದ್ದ. ಬುದ್ಧವರ್ಮನು ಅವನನ್ನು ಏಕಾಂತದಲ್ಲಿ ಕರೆಯಿಸಿ, ತನಗೆ ಬಂದಿರುವ ವಿಷಮ ಸಮಸ್ಯೆಯನ್ನು ಅವನಿಗೆ ವಿವರಿಸಿ ಹೇಳಿ, "ಈಗ ನಿಮ್ಮ ಸಹಾಯ



ವಿಲ್ಲದಿದ್ದರೆ ನನ್ನ ಮರ್ಯಾದೆ ಉಳಿಯುವುದಿಲ್ಲ. ನಿಮ್ಮ ಮಗನಾದ ಯಜ್ಞಗುಪ್ತ ಸುಂದರವಾಗಿದ್ದಾನೆ. ಸಕಲ ಶಾಸ್ತ್ರಗಳನ್ನೂ ಬಲ್ಲವನು. ನನ್ನ ಮಗನಿಗೆ ಬದಲಾಗಿ ಅವನು ಹೋಗಿ, ಸಾಗರದತ್ತನ ಕುಮಾರಿ ಯನ್ನು ಮದುವೆಯಾಗಿ, ಅವಳ ಕನ್ಯಾತ್ವಕ್ಕೆ ಭಂಗ ವಾಗದಂತೆ ಕರೆದು ತಂದು ನಮ್ಮ ಮನೆಯಲ್ಲಿ ಬಿಟ್ಟು ಬಿಟ್ಟರೆ, ಆ ಹುಡುಗಿಯೊಂದಿಗೆ ಬರುವ ಸ್ತ್ರೀ ಧನದಲ್ಲಿ ನಿಮಗೂ ಭಾಗವನ್ನು ಕೊಡುತ್ತೇನೆ" ಎಂದನು.

"ನಿಮ್ಮ ಕೋರಿಕೆ ನನಗೆ ಆಜ್ಞೆಯೂ ಹೌದು" ಎಂದು ಹೇಳಿ ಆ ಬ್ರಾಹ್ಮಣ ತನ್ನ ಮಗನನ್ನು ಕರೆದು, ಎಲ್ಲಾ ಸಂಗತಿಯನ್ನೂ ಅವನಿಗೆ ಹೇಳಿ, ಒಪ್ಪಿಸಿ ಕೊಟ್ಟನು. ಯಜ್ಞಗುಪ್ತ ಕೂಡಾ, "ಹಿರಿಯರ ಆಜ್ಞೆಯ ಗುಣದೋಷಗಳನ್ನು ಎಣಿಸಿಕೊಂಡಿರ ಬಾರದು" ಎಂದು ಹೇಳಿ ನಟಿಸಲು ಸಿದ್ಧನಾದನು.

ಎರಡು ದಿನಗಳ ಮೇಲೆ, "ನನ್ನ ಮಗ ತಾಮ್ರ ಲಿಪ್ತಿಯಿಂದ ಹಿಂದಿರುಗಿ ಬಂದ" ಎಂದು ಹೇಳಿ

ಬುದ್ಧವರ್ಮನು ಯಜ್ಞಗುಪ್ತನನ್ನು ಸಾಗರದತ್ತನ ರಾಯಭಾರಿಗಳ ಮುಂದೆ ಕರೆದು ತಂದನು.

ಅವರು ಅವನನ್ನು ನೋಡಿದ ಕೂಡಲೇ "ಮಲ್ಲಿಕ ಅದೃಷ್ಟಶಾಲಿನಿಯೇ ಸರಿ" ಎಂದು ಸಂತುಷ್ಟರಾದರು. ಆಮೇಲೆ ಅವರು ಬುದ್ಧವರ್ಮನಿಂದ ಅಪ್ಪಣೆ ಪಡೆದುಕೊಂಡು, ಒಳ್ಳೆಯ ದಿನಗಳನ್ನು ಗೊತ್ತು ಮಾಡಿ ಮದುವೆಗೆ ಬರಬೇಕೆಂದು ಹೇಳಿ ಅಲ್ಲಿಂದ ಹಿಂದಿರುಗಿದರು.

ಅದರಂತೆ ಮುಂದೆ ಒಂದುದಿನ ಬುದ್ಧವರ್ಮನು ಯಜ್ಞಗುಪ್ತನನ್ನು ಮದುಮಗನನ್ನಾಗಿ ಮಾಡಿ, ತನ್ನ ಮಗನಿಗೆ ಬ್ರಾಹ್ಮಣ ವೇಷ ಹಾಕಿದನು. ಈ ವಿಕಾರ ಬ್ರಾಹ್ಮಣನ ಕೈಯಲ್ಲಿ ಮದುಮಗನಿಗೆ ಬೇಕಾದ ಮಂಗಳ ವಸ್ತುಗಳು ತುಂಬಿದ ಚೀಲವಿದ್ದಿತು. ಹೀಗೆ ಬುದ್ಧವರ್ಮನು ಪರಿವಾರದೊಂದಿಗೆ ಉಜ್ಜಯಿನೀ ನಗರಕ್ಕೆ ಮದುಮಗನನ್ನು ಕಳುಹಿಸಿ ಕೊಟ್ಟನು.

ಅಲ್ಲಿಗೆ ತಲಪಿದ ಮೇಲೆ ಬೆಳಗ್ಗಿನ ಹೊತ್ತಿನ ಮುಹೂರ್ತದಲ್ಲಿ ವಿವಾಹ ನಡೆಯಿತು. ವಧೂವರರು ಅಗ್ನಿಕುಂಡದ ಸುತ್ತಲೂ ಪ್ರದಕ್ಷಿಣೆ ಬರುವುದನ್ನು ಮುಗಿಸಿದ ಕೂಡಲೇ, ಮದುಮಗನು ಕೆಟ್ಟ ಸ್ವರದಿಂದ ಕೂಗಿ ಸ್ಮೃಹೆ ತಪ್ಪಿದವನಂತೆ ಬಿದ್ದುಬಿಟ್ಟನು. ಇದೆಂತಹ ಅಶುಭವೋ! ಎಲ್ಲರೂ ಆಂದೋಳನೆಗೊಳಗಾದರು. ಬಹಳ ಹೊತ್ತು ವೈದ್ಯೋಪಚಾರಗಳು ನಡೆದ ಮೇಲೆ, ಯಜ್ಞಗುಪ್ತನು ಸ್ವಲ್ಪ ಕಣ್ಣು ತೆರೆದು ಹೀನ ಸ್ವರದಿಂದ, "ಪಕ್ಕೆಯೊಳಗೆ ಶೂಲಿ!" ಎಂದನು.

ಅವನನ್ನು ಒಳಗಿನ ಒಂದು ಕೋಣೆಯಲ್ಲಿ ಮಲಗಿಸಿ ವೈದ್ಯರು ಚಿಕಿತ್ಸೆಯನ್ನು ಮಾಡತೊಡಗಿದರು. ಹೊಸ ಮದುಮಗಳು ನಾಚಿಕೆಯಾಗಿರದೆ ಅವನ ಬಳಿಯಲ್ಲೇ ಇದ್ದು ವೈದ್ಯರು ಕುಡಿಸಲು ಹೇಳಿದ ಔಷಧಗಳನ್ನು ತಾನೇ ಅವನ ಬಾಯಿಗೆ ಸುರಿದಳು. ಆದರೆ ಎಷ್ಟು ಔಷಧ ಕೊಟ್ಟರೂ ಅವನ ಜೀರ್ಣ ಕೋಶದ ರೋಗ ಪೂರ್ತಿ ವಾಸಿಯಾಗಲಿಲ್ಲ.

ಒಪ್ಪಗೂನ ಕೂಡಾ ಮದುಮಗನ ಬಳಿಯಲ್ಲೇ ಇದ್ದು, ಮದುಮಗಳೊಂದಿಗೆ ಸರಸವಾಡಲೂ



ಪ್ರಾರಂಭಿಸಿಬಿಟ್ಟನು. ಅದನ್ನು ನೋಡಿ ಮಲ್ಲಿಕ ಕೋಪಗೊಂಡು ತಿರಸ್ಕಾರ ತೋರಿಸಿದಳು. ಆಗ ಯಜ್ಞಗುಪ್ತನು ಅವಳೊಂದಿಗೆ, "ಹಾಸ್ಯಗಾರನ ಮೇಲೆ ಕೋಪಮಾಡಬಹುದೆ? ಅವನಷ್ಟಕ್ಕೆ ಅವನೇನಾದರೂ ಮಾಡಲಿಬಿಡು!" ಎಂದನು.

ಆದರೆ ಗೂನನು ಮುಖ್ಯ ರಹಸ್ಯವನ್ನು ಎಲ್ಲಿ ಹೊರಗೆಡಹಿಬಿಡುವನೋ ಎಂದು ಯಜ್ಞಗುಪ್ತನಿಗೆ ಒಳಗೊಳಗೇ ಭಯವಾಗುತಿತ್ತು. ಆದುದರಿಂದ ಅವನು ಸಾಗರದತ್ತನೊಂದಿಗೆ, "ನನಗೆ ನನ್ನ ತಂದೆ ತಾಯಿಯರನ್ನು ನೋಡಬೇಕೆಂದಿದೆ" ಎಂದನು.

ಆಗ ವೈದ್ಯನು ಕೂಡ ಸಾಗರದತ್ತನೊಂದಿಗೆ "ಅಜೀರ್ಣಕ್ಕೆ ಕೊಡಬೇಕಾದ ಔಷಧಗಳನ್ನೆಲ್ಲಾ ಕೊಟ್ಟಿದ್ದೇನೆ. ಅದರಿಂದೇನೂ ಗುಣ ಕಾಣಿಸುವುದಿಲ್ಲ. ತಂದೆ ತಾಯಿಗಳ ಬಳಿಗೆ ಹೋಗಿಬಿಟ್ಟರೆ ಇವನ ರೋಗ ಪೂರ್ತಿ ವಾಸಿಯಾಗಬಹುದು. ಕಳುಹಿಸಿರಿ" ಎಂದು ತನ್ನ ಅಭಿಪ್ರಾಯ ಹೇಳಿದನು. ಆದರಂತೆ ಸಾಗರದತ್ತನು ತನ್ನ ಮಗಳನ್ನೂ ಅಳಿಯನನ್ನೂ ಪ್ರಯಾಣಕ್ಕೆ ಸಿದ್ಧಮಾಡಿಸಿ, ಮಗಳಿಗೆ ಸ್ತ್ರೀಧನವಾಗಿ ತಾನು ಕೊಡುವ ಕಾಣಿಕೆ ವಸ್ತು ಸಾಮಗ್ರಿಗಳನ್ನು ಅನೇಕ ಒಂಟೆಗಳ ಮೇಲೆ ಹೇರಿಸಿದನು. ಸಾಕಷ್ಟು ದಾಸಿಯರನ್ನೂ, ಅಂಗರಕ್ಷಕರನ್ನೂ ಜತೆಗೂಡಿಸಿ ರಾಜಗೃಹಕ್ಕೆ ಕಳುಹಿಸಿಕೊಟ್ಟನು. ಅವನ ಕೆಲಮಂದಿ ನೌಕರರು ಮುಂದಾಗಿ ಪ್ರಯಾಣ ಮಾಡಿ, ಪ್ರತಿ ಮಜಿಲಿಯ ಬಳಿಯಲ್ಲಿಯೂ ತಕ್ಕ ಏರ್ಪಾಡುಗಳನ್ನು ಮಾಡಿಟ್ಟು, ಮದುಮಗನ ಆರೋಗ್ಯವನ್ನು ಕುರಿತು ಸಮಾಚಾರ ತೆಗೆದುಕೊಳ್ಳುತ್ತಾ ಹೋದರು.

ಒಂದೊಂದೇ ಮಜಿಲಿಯನ್ನು ದಾಟುತ್ತಿದ್ದ ಹಾಗೆ ನಟನೆಯ ಮದುಮಗನ ಮಾಯದ ಕಾಯಿಲೆ ವಾಸಿಯಾಗುತ್ತಾ ಹೋಯಿತು. ರಾಜಗೃಹವನ್ನು ತಲಪುವಾಗ ಅವನು ಸಂಪೂರ್ಣ ಆರೋಗ್ಯಶಾಲಿಯಾಗಿಬಿಟ್ಟನು. ಈ ಸಮಾಚಾರ ತಿಳಿದ ಕೂಡಲೇ ಸಾಗರದತ್ತನು ಆನಂದಭರಿತನಾಗಿ, ಉಜ್ಜಯಿನಿಯಲ್ಲಿದ್ದ ಎಲ್ಲಾ ಜಾತಿಯವರಿಗೂ ದಾನಗಳನ್ನು ಮಾಡಿದನು. ಇಲ್ಲಿ ಬುದ್ಧವರ್ಮನು ತನ್ನ ಸೊಸೆಯನ್ನು ನೋಡಿ



ಬಹಳ ಸಂತೋಷಗೊಂಡನು. ಆ ರಾತ್ರಿಯಲ್ಲಿ ವಧೂ ವರರನ್ನು ಶೋಭನದ ಕೋಣೆಗೆ ಕಳುಹಿಸಿದರು. ಆ ಕೋಣೆಯೊಳಗೆ ಮಲ್ಲಿಕಳೊಂದಿಗೆ ಅವಳ ಗೆಳತಿಯರೂ, ಓಷ್ಟಗೂನನೂ, ಯಜ್ಞಗುಪ್ತನೂ ಇದ್ದರು.

"ಈ ಗೂನು ಬೆನ್ನಿನವನಿಗೆ ಇಲ್ಲೇನು ಕೆಲಸ ?" ಎಂದು ಮಲ್ಲಿಕ ತನ್ನೊಳಗೇ ಅಂದುಕೊಂಡಳು.

"ಪಾನಕದೊಳಗಿನ ಪೊರಕೇಚೂರಿನ ಹಾಗೆ ಈ ಬ್ರಾಹ್ಮಣವಟು ಇನ್ನೂ ಇಲ್ಲೇಕೆ ಇದ್ದಾನೆ ?" ಎಂದು ಓಷ್ಟಗೂನ ತನ್ನೊಳಗೇ ಅಂದುಕೊಂಡನು.

ಸಂದರ್ಭ ತಿಳಿದು ಯಜ್ಞಗುಪ್ತನು ಅಲ್ಲಿಂದ ಹೊರಟುಹೋಗಲು ಎದ್ದನು. ಅದನ್ನು ನೋಡಿ ಮಲ್ಲಿಕ, "ನೀವೆಲ್ಲಿಗೆ ಹೋಗುತ್ತೀರಿ ? ನನ್ನ ಗತಿಯೇನು ?" ಎಂದಳು ದುಃಖ ಗದ್ಗದಿತಳಾಗಿ.

"ನಿನಗೆ ಬಂದಿರುವ ಕಷ್ಟವೇನಿಲ್ಲ. ವಿಧಿ ನಿನಗೆ ಯಾವ ಗಂಡನನ್ನು ಬರೆದಿರುವನೋ ಆ ಗಂಡನೊಂದಿಗೆ ಜೀವನ ಯಾತ್ರೆಯನ್ನು ಸಾಗಿಸುತ್ತಿರು. ಇದರಲ್ಲಿ ನನ್ನದು ಪಾಪದ ಭಾರಮಾತ್ರವೇ" ಎಂದು ಹೇಳಿ ಯಜ್ಞಗುಪ್ತನು ಹೊರಗೆ ಹೋಗಿಬಿಟ್ಟನು. ಉಳಿದ ಗೆಳತಿಯರೂ ಕೂಡಾ ಹೊರಗೆ ಹೋದರು.

ಕಡೆಯವಳಾಗಿ ಹೊರಗೆ ಹೋಗಲು ತೊಡಗಿದ ಮಲ್ಲಿಕಳ ಕೈಯನ್ನು ಓಷ್ಟಗೂನನು ಹಿಡಿದು ನಿಲ್ಲಿಸಲು ನೋಡಿದನು. ಮಲ್ಲಿಕಾ, ಕಿಟ್ಟನೆ ಕಿರಿಚಿ ಕೊಡರಿಬಿಡಿಸಿಕೊಂಡು ಹೊರಗೆ ಓಡಿದಳು. ಅವಳು ಕೋಣೆಗಳನ್ನೆಲ್ಲಾ ದಾಟಿ, ಮನೆಯಿಂದ ಹೊರಗೆ ಬಂದಳು. ಎಲ್ಲಾ ಕೋಣೆಗಳಲ್ಲಿಯೂ ಮನುಷ್ಯರು ಆ ದಿನದ ಪ್ರಸ್ತದೂಟ ಉಂಡು, ಮೇಲಷ್ಟು ಕುಡಿದು ಮೈಮರೆತ ಸ್ಥಿತಿಯಲ್ಲಿದ್ದರು. ಕೆಲವರು ದಾಸಿಯರು ಆನಂದಪರವಶರಾಗಿ ನೃತ್ಯವಾಡಿಕೊಂಡಿದ್ದರು.

ಮಲ್ಲಿಕ ಬೀದಿಗೆ ಬಂದು ಯಾವನನ್ನೋ ನೋಡಿ "ಅಗೋ ! ಅಗೋ !" ಎಂದುಕೊಳುತ್ತ ಆ ಕಡೆಗೇ ಓಡಿದಳು. ಆಮೇಲೆ ಎತ್ತ ಓಡುತ್ತಿರುವೆನೆಂಬುದು ಅವಳಿಗೇ ಗೊತ್ತಾಗಲಿಲ್ಲ. ಎಲ್ಲೋ ಒಂದುಕಡೆ ದಾರಿಯ ಬದಿಯಲ್ಲಿ ವಿಪರೀತ ಕುಡಿತದಿಂದ ಮೈ ತಿಳಿಯದೆ ನಿದ್ರೆ ಮಾಡಿಕೊಂಡಿದ್ದ ಕಾಪಾಲಿಕನೊಬ್ಬ ಅವಳ ಕಣ್ಣಿಗೆ ಬಿದ್ದ.

ಅವಳು ತನ್ನ ಕರ್ತವ್ಯವನ್ನು ನಿರ್ಣಯಿಸಿಕೊಂಡು, ತನ್ನ ಶರೀರದಲ್ಲಿರುವ ನಗನಟ್ಟುಗಳನ್ನೆಲ್ಲಾ ಕಳಚಿ ಗಂಟುಕಟ್ಟಿ ಸೊಂಟದಲ್ಲಿ ತುರುಕಿಕೊಂಡಳು. ಕಾಪಾಲಿಕನ ಎಲ್ಲಾ ಪರಿಕರಗಳನ್ನೂ ತಾನೇ ಸಂಗ್ರಹಿಸಿಕೊಂಡು, ಅದೇ ವೇಷವನ್ನು ತಾನೂ ಹಾಕಿಕೊಂಡಳು. ತರುವಾಯ ತಾನು ಕೂಡಾ ಕುಡಿದು ಓಲಾಡುತ್ತಿರುವಂತೆ ನಡೆಯುತ್ತಾ, ನಗರವನ್ನು ದಾಟಿ ಒಂದು ಗ್ರಾಮದ ಕಡೆಗೆ ಸಾಗಿದಳು.

(ಮುಂದುವರಿಯುವುದು)






# ಬುದ್ಧಿಬಲ

ಅನೇಕ ವರ್ಷಗಳ ಹಿಂದೆ ಉತ್ತರ ದೇಶದೊಳಗಿನ ಒಂದು ಗ್ರಾಮದಲ್ಲಿ ಇಬ್ಬರು ಯುವಕರಿದ್ದರು. ಒಬ್ಬನ ಹೆಸರು ವೀರಸಿಂಹ, ಇನ್ನೊಬ್ಬನ ಹೆಸರು ಜ್ಞಾನಪ್ರಕಾಶ. ಇವರಿಬ್ಬರೂ ಪರಸ್ಪರ ಸ್ನೇಹಿತರಾಗಿದ್ದರು. ಆದರೆ ಅವರ ಸ್ವಭಾವಮಾತ್ರ ವಿರುದ್ಧವಾಗಿತ್ತು. ಜ್ಞಾನಪ್ರಕಾಶನು ಸೊರಕಲು ಮೈಯುವನಾಗಿ, ಬಲಹೀನನಾಗಿದ್ದರೂ ಅವನದು ಒಳ್ಳೆಯ ಸೂಕ್ಷ್ಮಬುದ್ಧಿ. ವೀರಸಿಂಹನು ಶರೀರಪುಷ್ಟಿಯಿಂದ ಬಲಿಷ್ಠನಾಗಿದ್ದು, ಧೈರ್ಯವುಳ್ಳವನು. ಆದರೆ ಪ್ರತಿಯೊಂದರಲ್ಲಿಯೂ ಗಡಿಬಿಡಿ, ಅವಸರ. ಬುದ್ಧಿಬಲವೂ ಅವನಿಗೆ ಕಡಮೆಯೇ. ಇಬ್ಬರೂ ಬಡ ಕುಟುಂಬಕ್ಕೆ ಸೇರಿದವರು.

ಈ ಸ್ನೇಹಿತರಿಬ್ಬರೂ ಒಂದುಸಾರಿ ಯಾವುದೋ ಒಂದು ದೂರ ಗ್ರಾಮಕ್ಕೆ ಹೊರಟರು. ನಡುದಾರಿಯಲ್ಲಿ ವೀರಸಿಂಹನಿಗೆ ಹಸಿವಾಗಲು ತೊಡಗಿತು. ದೂರದಲ್ಲಿ ಒಂದು ಹಳ್ಳಿ ಕಾಣಿಸುತಿತ್ತು. ಆಗ ಹಸಿವೆ ಇನ್ನಷ್ಟು ಹೆಚ್ಚಿತು. ಅಲ್ಲಿಗೆ ಹೋಗಿ ಯಾರನ್ನಾದರೂ ಊಟ ಹಾಕುವಂತೆ ಕೇಳಬೇಕೆಂದು ವೀರಸಿಂಹನಿಗೆ ತೋರಿತು. "ನನಗೆ ಅಷ್ಟೇನೂ ಹಸಿವಾಗುವುದಿಲ್ಲ. ಆದಲ್ಲದೆ ಇಬ್ಬರೂ ಒಂದೇಸಾರಿ ಹೋಗಿ ಊಟ ಕೇಳಿದರೆ ಸಿಕ್ಕುತ್ತದೋ ಇಲ್ಲವೋ? ಹೆಚ್ಚಿಗೆ ಹಸಿದಿರುವ ನೀನು ಮೊದಲು ಹೋಗಿ ಊಟ ಮಾಡಿಕೊಂಡು ಬಾ. ಅಷ್ಟರವರೆಗೆ ನಾನು ಈ ಮರದ ಕೆಳಗೆ ಕುಳಿತಿರುತ್ತೇನೆ" ಎಂದ ಜ್ಞಾನಪ್ರಕಾಶ.

ನಿಜ ಸಂಗತಿ ಏನೆಂದರೆ, ದುಡುಕುಬುದ್ಧಿಯವನಾದ, ಬಲಶಾಲಿ ವೀರಸಿಂಹನು ಊರಿನವರೊಂದಿಗೆ ಜಗಳ ತಂದುಕೊಳ್ಳುವನೆಂದು ಜ್ಞಾನಪ್ರಕಾಶನಿಗೆ ಗೊತ್ತು. ಹಸಿವೆಯಲ್ಲಿದ್ದಾಗ ಅವನಿಗೆ ಇರುವ ಬುದ್ಧಿಯೂ ಮಂಕಾಗಿ ಬಿಡುತ್ತದೆ. ತಾಳ್ಮೆಯಿಂದ ವಿಚಾರಿಸುವಂತಹ ತಲೆಯಲ್ಲ ಅವನದು. ಹಾಗಿರುವಾಗ ಅವನೊಂದಿಗೆ ಹೋದರೆ ಅನ್ನ ಸಿಗುವುದು ಹಾಗಿರಲಿ, ನೀರು ಕೂಡ ಸಿಗಲಾರದು. ಆದುದರಿಂದಲೇ ಅವನು ಹಳ್ಳಿಯೊಳಗೆ ವೀರಸಿಂಹನೊಬ್ಬನನ್ನೇ ಕಳುಹಿಸಿದನು.

ವೀರಸಿಂಹನು ಹಳ್ಳಿಯೊಳಗೆ ಹೋದಾಗ ಒಂದು ಮನೆಯಲ್ಲಿ ಒಬ್ಬ ರೈತನು ಹೊಲಕ್ಕೆ ಹೊರಡಲು ಸಿದ್ಧನಾಗಿ ಊಟಕ್ಕೆ ಕುಳಿತಿದ್ದನು. ವೀರಸಿಂಹನು ಆ ಮನೆಯೊಳಗೆ ಹೊಕ್ಕ. "ಓಹೋ, ಅಡಿಗೆ ತಯಾ

ಕೆ. ಪಾಂಡುರಂಗ



ರಾಗಿದೆ ಅಂತ ಕಾಣುತ್ತೆ. ಬಹಳ ಹಸಿವಾಗಿದೆ. ನನಗೂ ಊಟ ಹಾಕಿ ಬಿಡಿ" ಎಂದು ಹಕ್ಕಿನಿಂದ ಕೇಳುವವನಂತೆ ಕೇಳಿದನು.

ರೈತನೂ ರೈತನ ಹೆಂಡತಿಯೂ ಆ ಅಪರಿಚಿತನ ಅಧಿಕಾರದಂತಹ ಮಾತಿಗೆ ಬೆರಗಾಗಿ, ಸುಮ್ಮನೆ ಅವನನ್ನು ಟಕಮಕ ನೋಡಿದರು. "ನಿಮಗೇ ಹೇಳಿದ್ದು. ನನಗೆ ಬೇಗನೇ ಹೋಗಬೇಕು. ಬಡಿಸಿ ಬಿಡೀ ಅಂದೆ" ಎಂದು ವೀರಸಿಂಹ ಹುಂಕರಿಸುವಂತೆ ಹೇಳಿದ.

"ಏನಿದು ನಿನ್ನ ದಭಾಯಿಕೆ? ನಿನಗೆ ನಾವೇಕೆ ಊಟ ಹಾಕಬೇಕು? ನೀನೇನಾದರೂ ನಮ್ಮ ಬಂಧುವೆ? ನೆಂಟನೆ? ಯಾರಯ್ಯಾ ನೀನು?" ಎಂದು ರೈತ ಕೇಳಿದ.

"ಒಳ್ಳೆಯದರಲ್ಲಿ ಬಡಿಸುವಿಯಾ? ಪೂಜೆಗೀಜೆ ಬೇಕೆ? ನನಗೆ ತುಂಬ ಹಸಿವಾಗಿದೆಯೆಂದು ಮೊದಲೇ ಹೇಳಿದರೆ, ಹೀಗೋ ಕೇಳುವುದು?" ಎಂದು ವೀರಸಿಂಹ ಕೈಯಲ್ಲಿರುವ ಕೋಲನ್ನು ಆಡಿಸಿದನು.

ಇಷ್ಟರೊಳಗೆ ರೈತನ ಹೆಂಡತಿ, ಹಿಂದಿನ ಬಾಗಿಲಿನಿಂದ ಹೋಗಿ ಹತ್ತು ಮಂದಿಯನ್ನು ಕರೆದುಕೊಂಡು ಬಂದಳು. ಅವರು ಹಿಂದಿನಿಂದ ಬಂದು ವೀರಸಿಂಹನ ತಲೆಯ ಮೇಲೊಂದು ದೊಣ್ಣೆಯೇಟು ಹಾಕಿದರು. ಆ ಪೆಟ್ಟಿಗೆ ವೀರಸಿಂಹನು ನೆಲದ ಮೇಲೆ ಬಿದ್ದ. ಆಮೇಲೆ ಒಬ್ಬೊಬ್ಬರೂ ಒಂದೊಂದು ಏಟು ಬಿಗಿದು ಅವನನ್ನು ಬೀದಿಗೆ ದೂಡಿಬಿಟ್ಟರು. ವೀರಸಿಂಹನು ಬದುಕಿದರೆ ಬೇಡಿ ತಿಂದೇನೆಂದುಕೊಳ್ಳುತ್ತ, ಓಡಿ ಊರಮಂದಿಯಿಂದ ತಪ್ಪಿಸಿಕೊಂಡು ತನ್ನ ಮಿತ್ರನಿರುವ ಸ್ಥಳಕ್ಕೆ ಬಂದನು.

ಜ್ಞಾನಪ್ರಕಾಶನು ವೀರಸಿಂಹನಿಗೆ ಬಂದ ಗತಿಯನ್ನು ಅರ್ಥಮಾಡಿಕೊಂಡು "ನೀನು ಈ ಮರದ ಕೆಳಗೇ ಕೂತಿರು. ನಾನು ಒಂದು ಗಂಟೆಯೊಳಗೆ ಊಟ ತಂದು ಕೊಡುತ್ತೇನೆ" ಎಂದು ಹೇಳಿ ಹಳ್ಳಿಯ ಕಡೆಗೆ ನಡೆದನು.

ಅವನು ಆ ರೈತನ ಮನೆಗೇ ಬಂದು, ಅಲ್ಲಿ ಇನ್ನೂ ಗುಂಪುಗೂಡಿದ್ದ ಜನರನ್ನು ನೋಡಿ, ರೈತನೊಂದಿಗೆ. "ಅಯ್ಯಾ. ಸ್ವಲ್ಪ ಅನ್ನ ಹಾಕಿಸುವಿರಾ?" ಎಂದು ವಿನಯದಿಂದ ಕೇಳಿದ.

ಇದೇ ಈಗ ನಡೆದ ಸಂಭವದಿಂದ ಇನ್ನೂ ಕೋಪದಲ್ಲಿದ್ದ ಆ ರೈತ, "ಇದೇನೋ ಹುಡುಗಾಟವಾಗಿದೆ! ನಿನಗೆ ಅನ್ನವಲ್ಲ. ದುಂಡುದೊಣ್ಣೆಯಿಂದ ಪೂಜೆ ಕೊಡುತ್ತೇನೆ" ಎಂದನು.

ಜ್ಞಾನಪ್ರಕಾಶನು ಕೈ ಮುಗಿದು, "ನಾನು ಹಸಿವಿನಿಂದ ಶಕ್ತಿಗುಂದಿಹೋದ ಪ್ರಯಾಣಿಕ. ದೊಣ್ಣೆಯ ಏಟುಗಳನ್ನು ತಿಂದು ದಕ್ಕಿಸಿಕೊಳ್ಳಲಾರೆ" ಎಂದನು. ಎಲ್ಲರಿಗೂ ಗಬಕ್ಕನೆ ನಗೆ ಬಂದಿತು.

"ಈ ಊರಿನವರು ಧನವಂತರೆಂದೂ ದಯಾವಂತರೆಂದೂ ಕೇಳಿದೆ. ಊಟವಿಲ್ಲದಿದ್ದರೆ ಬೇಡ ಸ್ವಾಮಿ, ಒಂದು ಪಾತ್ರವನ್ನೂ ನಾಲ್ಕು ಚೂರು ಉರುವಲುಗಳನ್ನೂ, ಕೊಡಿರಿ. ನಾನೇ ಅಡಿಗೆ ಮಾಡಿ

ಕೊಳ್ಳುತ್ತೇನೆ. ನನಗೆ ಅದ್ಭುತ ರೀತಿಯಲ್ಲಿ ಅಡಿಗೇ ಮಾಡಲು ಗೊತ್ತಿದೆ" ಎಂದ ಜ್ಞಾನಪ್ರಕಾಶ.

ಅವನ ಮಾತಿಗೆ ಕನಿಕರಗೊಂಡು ಯಾರೋ ಒಬ್ಬರು ಒಂದು ಗಡಿಗೆ ಕೊಟ್ಟರು. ಕೆಲವರು ಒಣಗಿದ ಕಟ್ಟಿಗೆ ಚೂರುಗಳನ್ನು ತಂದು ಕೊಟ್ಟರು. ಜ್ಞಾನಪ್ರಕಾಶನು ಬೀದಿಯ ಬದಿಯಲ್ಲಿ ಮೂರು ಕಲ್ಲುಗಳನ್ನಿಟ್ಟು ಒಲೆ ಮಾಡಿ, ಗಡಿಗೆಯಲ್ಲಿ ನೀರು ಹಾಕಿ ಒಲೆಯ ಮೇಲಿಟ್ಟು, ಆ ನೀರು ಕುದಿಯುವಾಗ ಅದರೊಳಗೆ ಒಂದು ಚಿಕ್ಕ ಹರಳುಗಲ್ಲನ್ನು ಹಾಕಿದನು. ಅವನ ಅದ್ಭುತರೀತಿಯ ಅಡಿಗೆಯನ್ನು ನೋಡಲು ಊರೊಳಗಿನ ಹುಡುಗರು ಮಕ್ಕಳೆಲ್ಲಾ ಬಂದು ಗುಂಪು ಗೂಡಿದರು.

ಸ್ವಲ್ಪಹೊತ್ತಿನ ಮೇಲೆ ಜ್ಞಾನಪ್ರಕಾಶನು ಗಡಿಗೆಯ ನೀರನ್ನು ರುಚಿ ನೋಡಿ. "ಅದ್ಭುತ! ಇದರಲ್ಲಿ ಒಂದು ಆಲೂಗಡ್ಡೆ ಹಾಕಿಬಿಟ್ಟರೆ ಇನ್ನೂ ಚೆನ್ನಾಗಿರುತ್ತೆ" ಎಂದು ಎಲ್ಲರಿಗೂ ಕೇಳಿಸುವ ಹಾಗೆ ತನಗೆತಾನೇ ಹೇಳಿಕೊಂಡನು. ಕೂಡಲೇ ಕೆಲವು ಹುಡುಗರು ಓಡುತ್ತಾ ಹೋಗಿ ತಲಾ ಒಂದೊಂದು ಆಲೂಗಡ್ಡೆ ತಂದರು. ಜ್ಞಾನಪ್ರಕಾಶನು ಅವುಗಳನ್ನು ಗಡಿಗೆಯೊಳಗೆ ಹಾಕಿದನು.

ಮತ್ತೆ ಸ್ವಲ್ಪಹೊತ್ತಿನ ಮೇಲೆ ರುಚಿ ನೋಡಿ ಅವನು, "ಭೇಷ್! ಇದರಲ್ಲಿ ಸ್ವಲ್ಪ ಬೇಳೆ, ಏನೋ ಒಂದೆರಡು ಕಾಯಿಪಲ್ಲೆ, ಸ್ವಲ್ಪ ಅಕ್ಕಿ ಕೂಡಾ ಹಾಕಿಬಿಟ್ಟರೆ ಇದರ ರುಚಿಗೆ ಸಾಟಿಯೇ ಇಲ್ಲ!" ಎಂದ. ಅವನು ಹೇಳಿ ಬಾಯಿ ಮುಚ್ಚುವಷ್ಟರಲ್ಲಿ ಹುಡುಗರು ಓಡಿ ಹೋಗಿ ಅವನು ಕೋರಿದುದನ್ನೆಲ್ಲ ತಂದುಬಿಟ್ಟರು. ಬೇಗದಲ್ಲೇ ಘಮಘಮವೆನ್ನುವ ಒಂದು ರುಚಿಮುದ್ದೆ ತಯಾರಾಯಿತು.

ಜ್ಞಾನಪ್ರಕಾಶನು ಅದರ ರುಚಿ ನೋಡಿ, "ಓ! ತಪ್ಪಾಗಿ ಹೋಯಿತು. ಇದಕ್ಕೆ ಉಪ್ಪು ಹಾಕುವುದನ್ನೇ ಮರೆತುಬಿಟ್ಟೆನಲ್ಲಾ!" ಎಂದ.

ಮರುನಿಮಿಷದಲ್ಲಿ ಉಪ್ಪು ಕೂಡಾ ಬಂದುಬಿಟ್ಟಿತು. ಮುದ್ದೆಗೆ ಉಪ್ಪು ಕಲಸಿದ ಮೇಲೆ ಜ್ಞಾನಪ್ರಕಾಶನು ಒಲೆಯನ್ನು ಆರಿಸಿ, ಗಡಿಗೆಯನ್ನೆತ್ತಿಕೊಂಡು ವೀರಸಿಂಹನಿರುವಲ್ಲಿಗೆ ಹೋದನು. ಅವನ ಹಿಂದೆಯೇ ಹುಡುಗರ ಗುಂಪೂ ಸಾಗಿತು.

ಇಬ್ಬರೂ ದೊಡ್ಡದೊಡ್ಡ ಎಲೆಯನ್ನು ಕೊಯ್ದುಕೊಂಡು ಗಡಿಗೆಯಲ್ಲಿರುವ ರುಚಿಮುದ್ದೆಯನ್ನು ಬಡಿಸಿ ಹೊಟ್ಟೆ ತುಂಬಾ ತಿಂದರು. ಆಮೇಲೆ ಉಳಿದಿರುವುದನ್ನು ತಮ್ಮೊಂದಿಗಿರುವ ಹುಡುಗರಿಗೆ ಪಾಲು ಮಾಡಿ ಕೊಟ್ಟು "ರುಚಿ ನೋಡಿ. ಆಮೇಲೆ ಗಡಿಗೆಯನ್ನು ಶುಭ್ರವಾಗಿ ತೊಳೆದು ರೈತನಿಗೆ ಕೊಟ್ಟುಬಿಡಿ." ಎಂದು ಹೇಳಿ, ತಮ್ಮ ದಾರಿ ಹಿಡಿದು ಹೊರಟುಹೋದರು.



# ತಾನ್‌ಸೇನನ ಗುರು

ತಾನ್‌ಸೇನನ ಗಾಯನಕ್ಕೆ ಮುಗ್ಧನಾದ ಅಕ್ಬರ್ ಬಾದಷಹನು ತಾನ್‌ಸೇನನ ಗುರವಿನ ಗಾಯನ ಕೇಳಬೇಕೆಂದು ಬಯಸಿದನು. ಅದಕ್ಕಾಗಿ ತಾನ್‌ಸೇನ್ ಅಕ್ಬರನನ್ನು ಕಾಡಿನಲ್ಲಿ ತನ್ನ ಗುರು ತಪಸ್ಸು ಮಾಡುವ ಗುಹೆಗೆ ಕರೆದೊಯ್ದನು.

ತಾನ್‌ಸೇನನ ಗುರು ತಪಸ್ಸಮಾಧಿಯಲ್ಲಿದ್ದನು. ಎಷ್ಟು ಹೊತ್ತಾದರೂ ಅವನು ಗುಹೆಯಿಂದ ಹೊರಗೆ ಬಾರದಿರಲು, ತಾನ್‌ಸೇನ್ ಅಪಸ್ವರದಿಂದ ಒಂದು ಹಾಡು ಹಾಡಿದನು.

ಕೂಡಲೇ ಗುರು ಎದ್ದು ಬಂದು, "ಎಲೋ, ಅನಾಗರಿಕನೆ, ನನ್ನ ಶಿಷ್ಯನಾಗಿದ್ದು ಹೀಗೋ ಹಾಡುವುದು ?" ಎಂದು ಹೇಳಿ ತಾನು ಹಾಡಲು ತೊಡಗಿದನು. ಅವನ ಹಾಡನ್ನು ಕೇಳಲು ಅಡವಿಯೊಳಗಿನ ಪ್ರಾಣಿಗಳೆಲ್ಲಾ ಬಂದುಬಿಟ್ಟುವು. ಅಕ್ಬರನಿಗೆ ಪರಮಾನಂದವಾಯಿತು.

ಹಿಂದಿರುಗಿ ಬಂದ ಮೇಲೆ ಅಕ್ಬರ್ ತಾನ್‌ಸೇನನನ್ನು ಕುರಿತು, "ನಿನ್ನ ಗುರು ಹಾಡಿದಾಗ ಕಾಡುಮೃಗಗಳೆಲ್ಲಾ ಬಂದು ಕೂಡುವಂತೆ, ನೀನು ಹಾಡಿದರೆ ಬರುವುದಿಲ್ಲವೇಕೆ ?" ಎಂದು ಕೇಳಿದ. ಅದಕ್ಕೆ ಪಕ್ಕದಲ್ಲಿದ್ದ ಬೀರಬಲ್ ತಟಕ್ಕನೆ ಉತ್ತರ ಕೊಟ್ಟ: "ತಾನ್‌ಸೇನನ ಗುರು ಅಲ್ಲಾನ ಆಸ್ಥಾನ ಗಾಯಕರು, ತಾನ್‌ಸೇನ್ ತಮ್ಮ ಆಸ್ಥಾನಕ್ಕೆ ಮಾತ್ರ ಗಾಯಕರಲ್ಲವೆ ?"





# ಜಂಬಕ್ಕೆಭಡಿ

ಒಂದು ಊರಿನಲ್ಲಿ ಒಬ್ಬ ಗೃಹಸ್ಥನಿದ್ದ. ಅವನ ಹೆಸರು ಮಾಣಿಕ್ಯವರ್ಮ. ಅವನಿಗೆ ಯಾವ ಕೆಲಸ ಮಾಡದೆಯೇ ಸುಖವಾಗಿ ದಿನಗಳನ್ನು ಕಳೆಯುವಷ್ಟು ಪಿತ್ರಾರ್ಜಿತವಿದ್ದಿತು. ಆದುದರಿಂದ ಅವನು ಊರವರೊಂದಿಗೆ ತನ್ನ ಶಕ್ತಿ ಸಾಮರ್ಥ್ಯಗಳನ್ನು ಕುರಿತು ಜಂಬದ ಮಾತುಗಳನ್ನಾಡುತ್ತಾ, ಅದರಿಂದಾಗುವ ಸಂತೋಷದಿಂದ ಕಾಲಕ್ಷೇಪ ಮಾಡಿಕೊಂಡಿದ್ದ. ಹತ್ತು ರೂಪಾಯಿ ಬೆಲೆಬಾಳುವ ಒಂದು ವಸ್ತುವನ್ನು ತಾನು ಸಾಮರ್ಥ್ಯದಿಂದ ಐದು ರೂಪಾಯಿಗೆ ಕೊಂಡುಕೊಂಡೆನೆನ್ನುವನು. ಹೀಗೆ ಅವನ ಬುದ್ಧಿವಂತಿಕೆಗಳೆಲ್ಲಾ ಹೆಮ್ಮೆಯ ಮಾತುಗಳನ್ನು ಸೃಷ್ಟಿಸಿಕೊಳ್ಳುವುದಕ್ಕೇ ವಿನಿಯೋಗವಾಗುತಿತ್ತು.

ಒಂದುದಿನ ಮಾಣಿಕ್ಯವರ್ಮ ಹರಿಕಥಾ ಕಾಲಕ್ಷೇಪ ಕೇಳಲು ಹೋದ. ಅಲ್ಲಿ ಅವನಿಗೆ ಮತ್ತೊಬ್ಬ ಮನುಷ್ಯನ ಪರಿಚಯವಾಯಿತು. ಹರಿಕಥೆ ಮುಗಿದ ಮೇಲೆ ಇಬ್ಬರೂ ಲೋಕಾಭಿರಾಮವಾಗಿ ಮಾತಾಡುತ್ತಾ ಸ್ವಲ್ಪ ದೂರದವರೆಗೆ ಕೂಡಿ ನಡೆದರು. ಮಧ್ಯದಾರಿಯಲ್ಲಿ ಆ ಹೊಸ ಮನುಷ್ಯ ಮಾಣಿಕ್ಯವರ್ಮನೊಂದಿಗೆ ಹೀಗೆ ಹೇಳಿದ:

"ಈ ದಿನ ಮಹಾರಾಜರ ಮನೆಯಲ್ಲಿ ಒಂದು ವಿಚಿತ್ರ ನಡೆಯಿತು. ರಾಜರು ಹತ್ತು ಮಂದಿಯೊಂದಿಗೆ ಮಾತಾಡುತ್ತಿರುವಾಗ, ರಾಣಿಯವರಿಗೆ ಹೊಟ್ಟೆಯುಬ್ಬರ ಬಂದಿತೆಂದು ಒಳಗಿನಿಂದ ಸಮಾಚಾರ ಬಂತು. ಆಗ ರಾಜರ ಹತ್ತಿರ ಒಬ್ಬ ನೆರೆಯೂರಿನ ವೈದ್ಯನಿದ್ದ. ರಾಜರು ರಾಣಿಯವರಿಗೆ ವೈದ್ಯ ಮಾಡಲು ಆ ವೈದ್ಯನನ್ನು ಒಳಗೆ ಕಳುಹಿಸಿದರು. ಆ ವೈದ್ಯ ಒಳಗೆ ಹೋಗಿ ಸ್ವಲ್ಪ ಶುಂಠಿ ರಸವನ್ನು ಕುದಿಸಿ ಬೆಲ್ಲ ಸೇರಿಸಿ ಕುಡಿಯಲು ಕೊಟ್ಟ. ಅದನ್ನು ಕುಡಿದ ಕೂಡಲೇ ರಾಣಿಯವರ ಹೊಟ್ಟೆಯುಬ್ಬರ ತಟಕ್ಕನೆ ನಿಂತುಹೋಯಿತು. ಆಗ ರಾಣಿಯವರು ಸಂತೋಷದಿಂದ ಏನು ಮಾಡಿದರು ಗೊತ್ತೇ? ಸಮೀಪದಲ್ಲಿ ಯಾರೂ ಇಲ್ಲದಿರುವುದನ್ನು ನೋಡಿ ತನ್ನ ಕೊರಳಲ್ಲಿದ್ದ ರತ್ನ ಹಾರವನ್ನು ತೆಗೆದು ಆ ವೈದ್ಯನಿಗೆ ಬಹುಮಾನವಾಗಿ ಕೊಟ್ಟು, 'ಇದನ್ನು ಜಾಗ್ರತೆಯಿಂದ ಅಡಗಿಸಿಟ್ಟುಕೋ, ಯಾರಿಗೂ ಹೇಳಬೇಡ' ಎಂದರು. ನೋಡಿದೆಯಾ, ಕೇವಲ ಒಂದು ಶುಂಠಿ ಕಷಾಯಕ್ಕೆ ರತ್ನಹಾರದ ಬಹುಮಾನ! ಏಕೆ ಹೇಳುವೆನೆಂದರೆ ಸೇವೆ ಮಾಡಿದರೆ ದೊಡ್ಡವರ ಸೇವೆ ಮಾಡ

ಎನ್. ವಿ. ಗೋಪಾಲ



ಬೇಕು. ಆ ವೈದ್ಯ ನನ್ನ ಮಿತ್ರನಾದುದರಿಂದ ಈ ರಹಸ್ಯ ನನ್ನ ಹತ್ತಿರ ಹೇಳಿದ."

ಹೀಗೆ ಮಾತಾಡುತ್ತ ಅವರಿಬ್ಬರೂ ಒಂದು ಇಳಿ ಬಾವಿಯ ಬಳಿಗೆ ಬಂದರು. ಈ ಸಮಾಚಾರ ಹೇಳಿದವನು ತನಗೆ ಬಾಯಾರಿಕೆಯಾಗಿದೆ ಎಂದು ಹೇಳಿ ಆ ಬಾವಿಗೆ ಇಳಿದನು.

ಅವನು ನೀರು ಕುಡಿದು ಮೇಲೆ ಬಂದ ಮೇಲೆ ಮಾಣಿಕ್ಯವರ್ಮನೊಂದಿಗೆ ಸ್ವಲ್ಪ ದೂರ ನಡೆದು, ಮತ್ತೆ ಇದಿರಾದ ಕವಲು ದಾರಿಯಲ್ಲಿ ಅಗಲಿ ತನ್ನ ಊರಿಗೆ ಹೊರಟುಹೋದನು.

ಮಾಣಿಕವರ್ಮನು ಮನೆಗೆ ತಲಪಿದಾಗ ಹೊತ್ತು ಮೀರಿ ಹೋದುದರಿಂದ ಅವನ ಹೆಂಡತಿ "ಇಷ್ಟು ಹೊತ್ತು ಏನು ವಿಶೇಷ? ಎಲ್ಲಿಗೆ ಹೋದಿರಿ?" ಎಂದು ಕೇಳಿದಳು.

ಹೆಮ್ಮೆಯಿಂದ ಜಂಬದ ಮಾತುಗಳಿಗೆ ಅಭ್ಯಾಸವಾಗಿ ಹೋದ ಮಾಣಿಕ್ಯವರ್ಮ, ತನ್ನ ಹೆಂಡತಿಯೊಂದಿಗೆ, "ಈ ದಿನ ಎಷ್ಟೊಂದು ವಿಚಿತ್ರ ನಡೆಯಿತು ಗೊತ್ತೇ? ಹಾಗೊಮ್ಮೆ ಮಹಾರಾಜರನ್ನು ನೋಡಿ ಬರೋಣವೆಂದು ಹೋದೆ. ಹೋದ ಮೇಲೆ ಏನಾದರೂ ಮಾತಾಡದಿರಲು ಆಗುತ್ತದೆಯೆ? ಆ ಸಮಯದಲ್ಲಿ ರಾಣಿಯವರಿಗೆ ತಾಳಲಾಗದ ಹೊಟ್ಟೆ ಶೂಲಿಬಂತೆಂದು ಹೇಳಿದರು. ನಾನು ಅದನ್ನು ಗುಣಪಡಿಸುತ್ತೇನೆಂದು ಹೇಳಿದ ಕೂಡಲೇ ನನ್ನನ್ನು ಒಳಗೆ ಕಳಿಸಿದರು. ಅಬ್ಬ! ಮಹಾರಾಜರ ಅಂತಃಪುರ ಎಷ್ಟೊಂದು ವೈಭವವಾಗಿತ್ತು! ಹುಟ್ಟಿದ್ದಕ್ಕೆ ಅದನ್ನೊಮ್ಮೆ ನೋಡಲೇ ಬೇಕು. ಹಂಸತೂಲಿಕಾ ತಲ್ಪದ ಮೇಲೆ ರಾಣಿಯವರು ಹೊಟ್ಟೆ ಶೂಲಿಯಿಂದ ನರಳಾಡಿಕೊಂಡಿದ್ದಾರೆ. ನಾನು ಕೂಡಲೇ ಕುಮಟಿ ಉರಿಯಲ್ಲಿ ಶುಂಠಿ ರಸವನ್ನು ಬೆಲ್ಲದಲ್ಲಿ ಕುದಿಸಿ ತಣಿಸಿ ಮಹಾರಾಣಿಯವರಿಗೆ ಕುಡಿಸಿದೆ. ಅದು ಹೊಟ್ಟೆಯೊಳಗೆ ಹೋದದ್ದೇ ತಡ, ರಾಣಿಯವರ ಹೊಟ್ಟೆ ನೋವು ಮಂತ್ರಮಾಡಿದ ಹಾಗೆ ಮಾಯವಾಗಿ ಹೋಯಿತು. ರಾಣಿಯವರು ನನ್ನ ವೈದ್ಯವನ್ನು ಮೆಚ್ಚಿಕೊಂಡು ತಮ್ಮ ಕೊರಳಿನಲ್ಲಿದ್ದ ರತ್ನಹಾರವನ್ನು ತೆಗೆದು ನನ್ನ ಕೈಗೆ ಹಾಕಿದರು. ಮಹಾರಾಣಿಗೆ ಅದೆಲ್ಲಾ ಒಂದು ಲೆಕ್ಕವೇ?" ಎಂದನು.

"ಎಲ್ಲಿದೆ ಆ ರತ್ನಹಾರ?" ಎಂದು ಆತುರದಿಂದ ಕೇಳಿದಳು ಹೆಂಡತಿ.

"ಅದು ಹೇಗಿತ್ತು ಗೊತ್ತೇ? ಧಗಧಗನೆ ಹೊಳೆಯುತ್ತಿತ್ತು. ಅಂತಹ ಬೆಲೆಬಾಳುವ ಅಪೂರ್ವ ರತ್ನಹಾರವನ್ನು ಅರ್ಧರಾತ್ರಿಯ ಹೊತ್ತಿನಲ್ಲಿ ಮನೆಯವರೆಗೆ ತಂದು ಅಡಗಿಸಿಡುವುದು ಕಷ್ಟವೆಂದು ಮಾಡಿ, ದಾರಿಯಲ್ಲಿದ್ದ ಆ ಇಳಿಬಾವಿಯ ಪೊಟರೆಯೊಳಗೆ ಅಡಗಿಸಿಟ್ಟು ಬಂದಿದ್ದೇನೆ. ನಾಳೆ ಕತ್ತಲಾಗುವಾಗ ಹೋಗಿ ತಂದು ಕೊಳ್ಳೋಣ. ಅಷ್ಟರೊಳಗೆ ಅದನ್ನು ಏನು ಮಾಡುವುದೆಂದು ಯೋಚಿಸೋಣ." ಎಂದ ಮಾಣಿಕ್ಯವರ್ಮ.

ಅವನ ಹೆಂಡತಿಗೆ ಆ ರಾತ್ರಿ ನಿದ್ದೆಯೇ ಬರಲಿಲ್ಲ. ಆ ರತ್ನಹಾರವನ್ನು ಕಣ್ಣಿನಿಂದ ನೋಡುವವರೆಗೆ ಅವಳಿಗೆ ಹಸಿವೆ ನೀರಡಿಕೆ ಕೂಡ ಗೊತ್ತಾಗದಂತಾಗಿತ್ತು. ಅವಳು ಮೂಡಲು ಕೆಂಪಾಗುವ ವರೆಗೂ ಎಚ್ಚರವಾಗಿದ್ದು, ಆ ಕೂಡಲೇ ಬಿಂದಿಗೆಯನ್ನು ಕಂಕುಳಲ್ಲಿಟ್ಟುಕೊಂಡು, ಆ ದಾರಿಯ ಬದಿಯ ಇಳಿಬಾವಿಗೆ ಹೋಗಿ ಅದರೊಳಗಿಳಿದಳು.

ಒಂದು ಪೊಟರೆಯೊಳಗೆ ಅವಳಿಗೊಂದು ಹಾರವು ಕಂಡೇ ಕಂಡಿತು. ಅವಳು ಅದನ್ನು ತೆಗೆದುಕೊಂಡು "ಆಹಾ!" ಎನ್ನುತ್ತ ತಲೆ ತಿರುಗಿ ಬಾವಿಯೊಳಗೆ ಬಿದ್ದು ಕೆಟ್ಟ ಸ್ವರದಿಂದ ಕೂಗುತ್ತ ತಟಪಟನೆ ನೀರಿನಲ್ಲಿ ಹೊಡೆದಾಡ ತೊಡಗಿದಳು.

ಅವಳ ಕೂಗು ಕೇಳಿ ಜನರು ಓಡುತ್ತಾ ಬಂದು ಅವಳನ್ನು ಮೇಲಕ್ಕೆ ಎತ್ತಿದರು. ಅವಳ ಮುಷ್ಟಿಯೊಳಗೆ ರತ್ನಹಾರವು ಭದ್ರವಾಗಿತ್ತು. ಅದನ್ನು ನಾಲ್ಕು ಮಂದಿ ನೋಡಿದರು. ಈ ವಾರ್ತೆ ಕೆಲವೇ ಕ್ಷಣಗಳಲ್ಲಿ ರಾಜಭಟರ ಕಿವಿಗೆಬಿತ್ತು.

ಹಿಂದಿನ ರಾತ್ರಿ ಅರಮನೆಯಲ್ಲಿ ಮಹಾರಾಣಿಯ ರತ್ನಹಾರವು ಕಳವಾಗಿ ಹೋಗಿದ್ದುದು ನಿಜವೇ. ಆದುದರಿಂದ ಆ ಕಳ್ಳನನ್ನು ಹುಡುಕಲು ರಾಜಭಟರು ಅಲ್ಲಲ್ಲಿ ಹೊಂಚು ಹಾಕಿಕೊಂಡಿದ್ದರು. ಕಳೆದ ರಾತ್ರಿ ರಾಣಿಗೆ ಸ್ವಲ್ಪ ಹೊಟ್ಟೆ ನೋವು ಬಂದ ಮಾತು ಕೂಡಾ ನಿಜವೇ. ಅವಳಿಗೆ ಔಷದ ಕೊಟ್ಟವನು ಬೇರೆ ಯಾರೂ ಅಲ್ಲ, ಮಾಣಿಕ್ಯವರ್ಮನೊಂದಿಗೆ ಹರಿಕಥೆಯಿಂದ ಹರಟೆ ಹೊಡೆಯುತ್ತಾ ಬಂದವನೇ. ಅವನೇ ರಾಣಿಗೆ ಔಷಧವನ್ನು ಕೊಟ್ಟು, ಉಪಾಯವಾಗಿ ರಾಣಿಯ ರತ್ನ ಹಾರವನ್ನು ಕದ್ದುಕೊಂಡು ಬಂದು, ಹರಿಕಥೆಯ ಗುಂಪಿನಲ್ಲಿ ಅಡಗಿಕುಳಿತಿದ್ದನು. ನಗರ ದ್ವಾರದಿಂದ ಹೊರಗೆ ಹೋಗುವಾಗ ದ್ವಾರರಕ್ಷಕರು ಶೋಧನೆ ಮಾಡುವುದರಿಂದ, ರತ್ನ ಹಾರವನ್ನು ಇಳಿಬಾವಿಯ ಪೊಟರೆಯಲ್ಲಿ ಅಡಗಿಸಿಟ್ಟನು. ಅವನು ಮಾಡಿದ ಒಂದು ತಪ್ಪು ಏನೆಂದರೆ, ಜಂಬದ ಕೋಳಿಯಾದ ಮಾಣಿಕ್ಯವರ್ಮನೊಂದಿಗೆ ಮಾತಾಡಿದುದು ಒಂದೇ.

ಮಾಣಿಕ್ಯವರ್ಮನ ಹೆಂಡತಿಯಿಂದ ಸಂಗತಿ ತಿಳಿದು, ಮಾಣಿಕ್ಯವರ್ಮನನ್ನು ರಾಜಭಟರು ಹಿಡಿದುಕೊಂಡು ಹೋದರು.

ತಾನು ಕದಿಯಲಿಲ್ಲವೆಂದು ಅವನೆಷ್ಟು ಮೊರೆಯಿಟ್ಟರೂ ಕೇಳದೆ ಅವನೇ ಕಳ್ಳನೆಂದು ನಿರ್ಣಯಿಸಿ ರಾಜನು ಅವನಿಗೆ ಛಡಿ ಶಿಕ್ಷೆ ಕೊಡಿಸಿದನು. ಸಾಕುಸಾಕೆನಿಸುವಷ್ಟು ಸಿಕ್ಕಿದ ಆ ಛಡಿಗಳ ಬಿಸಿಗಳಿಂದ ಮಾಣಿಕ್ಯವರ್ಮನ ನಾಲಗೆಗೆ ಅಂಟಿದ ಜಂಬದ ಮಾತುಗಳು ಕಟ್ಟಾದುವು. ಮತ್ತೆ ಆ ದುರಭ್ಯಾಸ ಅವನನ್ನು ಬಿಟ್ಟು ಹೊರಟುಹೋಯಿತು.



# ಕುದುರೇ ಕಳ್ಳ

ಒಬ್ಬ ಕಳ್ಳ ಕುದುರೇ ವ್ಯಾಪಾರಿಯೊಬ್ಬನ ಕುದುರೆಯನ್ನು ಕದಿಯುವಾಗಲೇ ಸಿಕ್ಕಿಬಿದ್ದ. "ಏಕೆ ಇಂಥಾ ಹಾಳು ಕೆಲಸ ಮಾಡಿದಿ ?" ಎಂದು ಕುದುರೇ ವ್ಯಾಪಾರಿ ಕಳ್ಳನನ್ನು ಕೇಳಿದ. "ಅಯ್ಯಾ, ನಾಲ್ಕು ದಿನಗಳಿದ ಉಪವಾಸ. ಅದಕ್ಕೇ ಇಂಥ ಪಾಪ ಮಾಡಿದೆ. ನನ್ನನ್ನು ಕ್ಷಮಿಸಿ ಬಿಟ್ಟುಬಿಡಿ. ಇನ್ನೆಂದೂ ಇಂಥಾ ಕೆಲಸ ಮಾಡಲಾರೆ" ಎಂದ ಕಳ್ಳ ದೀನನಾಗಿ.

ವ್ಯಾಪಾರಿ ಸ್ವಲ್ಪ ಆಲೋಚನೆ ಮಾಡಿ, "ನಿನಗೇನಾದರೂ ಕೆಲಸಕೊಡೋಣವೆಂದರೆ ಶುದ್ಧ ಕೈಲಾಗದವನಂತಿರುವೆಯಲ್ಲಾ ?" ಎಂದನು.

"ಅದೇನು ಕೆಲಸ ಸ್ವಾಮೀ ?" ಎಂದು ಕಳ್ಳ ಆಶೆಯಿಂದ ಕೇಳಲು, "ಮತ್ತೇನಿಲ್ಲ, ಇಷ್ಟು ಸುಲಭದಲ್ಲಿ ಸಿಕ್ಕಿಬೀಳುವವನು ನನಗೆ ಕುದುರೆಗಳನ್ನು ಹೇಗೆ ತಂದುಕೊಡುತ್ತೀ ?" ಎಂದ ಕುದುರೇ ವ್ಯಾಪಾರಿ. ಕಳ್ಳ ನಿಜಕ್ಕೂ ಪೆಚ್ಚಾದ.





# ಹೃದಯಫಲಕ

ಹಿಂದೆ ಒಂದುಕಾಲದಲ್ಲಿ ಸುಂದರಪುರದ ಯುವ ರಾಜನಾದ ಶೀಲಕುಮಾರನು ಪ್ರಪಂಚ ನೋಡುವ ಅಭಿಲಾಷೆಯಿಂದ ವೇಷ ಬದಲಾಯಿಸಿಕೊಂಡು ಹೊರಟನು. ಅವನು ತನ್ನ ಕುದುರೆಯ ಮೇಲೆ ಆರು ತಿಂಗಳವರೆಗೆ ಅನೇಕ ರಾಜ್ಯಗಳನ್ನು ನೋಡಿ ಎಷ್ಟೋ ವಿಷಯಗಳನ್ನು ತಿಳಿದುಕೊಂಡನು. ತರುವಾಯ ಹಿಂದಿರುಗಿ ಬರುವಾಗ ಹೊಸ ದೇಶಗಳನ್ನು ನೋಡುತ್ತ, ರಾಜ್ಯಪಟವೆಂಬ ಒಂದು ಸಣ್ಣ ರಾಜ್ಯಕ್ಕೆ ಬಂದನು. ಅದು ಬಹಳ ಸುಂದರವಾದ ದೇಶ. ಅಲ್ಲಿಯ ಭವನಗಳೂ, ಕೆರೆಗಳೂ, ಸರೋವರಗಳೂ, ವನಗಳೂ, ಉದ್ಯಾನಗಳೂ ಶೀಲಕುಮಾರನನ್ನು ತುಂಬ ಆನಂದದಿಂದ ಪರವಶಗೊಳಿಸಿದುವು.

ಅಲ್ಲಿ ಅವನು ನಗರದ ಸೌಂದರ್ಯವನ್ನು ನೋಡುತ್ತ ಹೋಗುವಾಗ ಎತ್ತರವಾದೊಂದು ಪ್ರಾಕಾರವು ಕಾಣಿಸಿತು. ಅಲ್ಲಿಯ ದ್ವಾರದಲ್ಲಿದ್ದ ಕಾವಲುಗಾರರನ್ನು ವಿಚಾರಿಸಿದಾಗ, ಅದು ರಾಜಕುಮಾರಿ ಶಾಲಿನಿ ಎಂಬವಳ ಉದ್ಯಾನವೆಂದು ತಿಳಿಯಿತು. ಅದರೊಳಗೆ ಪುರುಷರಾರೂ ಪ್ರವೇಶಿಸಲು ಅನುಮತಿಯಿಲ್ಲವೆಂದೂ ಗೊತ್ತಾಯಿತು.

ಆದರೆ ಶೀಲಕುಮಾರನಿಗೆ ಹೇಗಾದರೂ ಆ ಉದ್ಯಾನವನ್ನು ಹೊಕ್ಕು ನೋಡಬೇಕೆಂಬ ಆಶೆ ಬಲವಾಯಿತು. ಅವನು ಒಂದು ಬಿಡದಿಯಲ್ಲಿ ಕುದುರೆಯನ್ನು ಬಿಟ್ಟು, ಆ ಉದ್ಯಾನದ ಸುತ್ತಲೂ ಹೊರಗಿನಿಂದಲೇ ತಿರುಗುತ್ತ ಹಿಂದಿನ ಭಾಗದಲ್ಲಿರುವ ಪ್ರಾಕಾರದ ಮೇಲೆ ಲಾಘವದಿಂದ ಹತ್ತಿ, ಒಳಗಡೆಗೆ ಧುಮುಕಿದನು. ಕಣ್ಣೆದಿರು ಕಟ್ಟಿದ ಆ ಉದ್ಯಾನದ ಸೌಂದರ್ಯವು ದೇವೇಂದ್ರನ ನಂದನವನವನ್ನೂ ಮೀರಿಸುವಂತೆ ತೋರಿತು. ಶೀಲಕುಮಾರನು ಅಲ್ಲಿರುವ ವಿಚಿತ್ರವೃಕ್ಷಗಳನ್ನೂ, ಅದಕ್ಕಿಂತ ವಿಚಿತ್ರವಾದ ಪುಷ್ಪಗಳನ್ನೂ ನೋಡಿ ಆನಂದಿಸುತ್ತ ಸ್ವಲ್ಪಹೊತ್ತು ವಿಹಾರ ಮಾಡಿದನು. ತಣ್ಣಗೆ ಬೀಸುವ ಎಳೆಗಾಳಿ ಹೊತ್ತುತರುವ ನರುಗಂಪು ಅವನಿಗೆ ಒಂದು ಬಗೆಯ ಮತ್ತನ್ನು ತಂದಿತು.

ಅವನು ಒಂದು ಮರದ ನೆರಳಿನಲ್ಲಿ ಕುಳಿತುಕೊಂಡು, ತನ್ನ ಕೊಳಲನ್ನು ತೆಗೆದುಕೊಂಡು ಸುಸ್ವರದಿಂದ ಊದಲು ತೊಡಗಿದನು. ಆಗ ಆ ಸುನಾದವನ್ನು ಕೇಳಿ ಸಮೀಪದಲ್ಲಿದ್ದ ಹುತ್ತಿನೊಳಗಿನಿಂದ ಒಂದು ನಾಗರಹಾವು ಹೊರಗೆ ಬಂದು ಅವನ ಮುಂದೆ

ಪಿ. ಸಿ. ಸರ್ಕಾರ್, ಐಂದ್ರಜಾಲಿಕರು



ನಿಂತು ಹೆಡೆಯೆತ್ತಿ ಆಡತೊಡಗಿತು. ಅದನ್ನು ನೋಡಿದ ಕೂಡಲೇ ಅವನು ಕೊಳಲೂದುವುದನ್ನು ನಿಲ್ಲಿಸಿದನು. ಮರುಕ್ಷಣದಲ್ಲಿ ಆ ಹಾವು ಅವನನ್ನು ಕಡಿದು ಓಡಿಹೋಯಿತು. ಮತ್ತೆ ಕೆಲವೇ ಕ್ಷಣಗಳಲ್ಲಿ ಅವನ ಮುಖವು ನೀಲಬಣ್ಣಕ್ಕೆ ತಿರುಗಿತು. ಅವನು ಸ್ಮೃಹೆ ತಪ್ಪಿ ಬಿದ್ದುಬಿಟ್ಟನು.

ಶೀಲಕುಮಾರನು ಕೊಳಲೂದಲು ಪ್ರಾರಂಭಿಸಿದ ಕೂಡಲೇ, ಆ ಉದ್ಯಾನದ ಮಧ್ಯದಲ್ಲಿದ್ದ ಕ್ರೀಡಾ ಭವನದೊಳಗೆ ಸಖಿಯರೊಂದಿಗಿದ್ದ ಶಾಲಿನೀಕುಮಾರಿ ಅದನ್ನು ಕೇಳಿದಳು. ತನ್ನ ಉದ್ಯಾನದೊಳಗೆ ತನಗೆ ತಿಳಿಯದಂತೆ ಯಾರು ಬಂದಿರುವರೆಂದು ಆಶ್ಚರ್ಯ ಪಡುತ್ತ, ಸಖಿಯರೊಂದಿಗೆ ಶೀಲಕುಮಾರ ನಿರುವ ಸ್ಥಳಕ್ಕೆ ಬಂದಳು.

ಆಗ ಶೀಲಕುಮಾರನು ಅಚಲನಾಗಿ ಬಿದ್ದುಬಿಟ್ಟಿದ್ದ. ಶಾಲಿನಿ ಅವನಿಗೆ ಚಿಕಿತ್ಸೆ ಮಾಡಿಸಿ ಸ್ಮೃಹೆ ಬರುವಂತೆ ಮಾಡಿದಳು. ಆಮೇಲೆ ಅವನನ್ನು ತನ್ನ ಕ್ರೀಡಾ ಭವನಕ್ಕೆ ಕರೆದುಕೊಂಡು ಹೋಗಿ, ಅಲ್ಲಿ ನಾಲ್ಕು ದಿನಗಳವರೆಗೆ ರಹಸ್ಯವಾಗಿ ಅವನನ್ನು ಇರಿಸಿಕೊಂಡು ಹೆಚ್ಚಿನ ಆರೈಕೆಗಳನ್ನು ಮಾಡಿ ಕಾಪಾಡಿದಳು. ಅವನೂ ಎಂದಿನಂತೆ ಆರೋಗ್ಯಶಾಲಿಯಾದನು.

ರಾಜಕುಮಾರಿಗೆ ಸ್ವಂತವಾದ ಆ ಅಂತಃಪುರ ಉದ್ಯಾನದೊಳಗೆ ಇತರರು ಪ್ರವೇಶ ಮಾಡುವುದು ಬಹುದೊಡ್ಡ ತಪ್ಪು. ಇದು ರಾಜನಿಗೋ ಬೇರೆ ಯಾರಿಗೋ ತಿಳಿದುಬಿಟ್ಟರೆ, ಆ ತಪ್ಪಿಗೆ ಕಡು ಕಠಿನವಾದ ಶಿಕ್ಷೆ ವಿಧಿಸಿ ಬಿಡುತ್ತಾರೆ. ಇದನ್ನು ಅರಿತಿದ್ದವಳಾದುದರಿಂದಲೇ ಶಾಲಿನಿ ಅವನನ್ನು ರಹಸ್ಯವಾಗಿ ತನ್ನ ಕ್ರೀಡಾಭವನದೊಳಗೆ ಇರಿಸಿ, ತನ್ನ ಸಖಿಯರ ಮೂಲಕ ಅವನ ಪರಿಚರ್ಯೆ ಮಾಡಿಸಬೇಕಾಗಿ ಬಂತು. ಅವನು ಒಂದು ದೇಶದ ಯುವರಾಜನೆಂದೂ, ಅವನ ಬುದ್ಧಿ ನಿಷ್ಕಲ್ಮಷವಾದುದೆಂದೂ ತಿಳಿದುಕೊಂಡಮೇಲೆ ಶಾಲಿನಿ ಅವನನ್ನು ಬಹಳ ಸ್ನೇಹದಿಂದ ಕಂಡಳು. ಅವನು ಅಲ್ಲಿದ್ದ ನಾಲ್ಕು ದಿನಗಳಲ್ಲಿ ಅವರಿಬ್ಬರ ಸ್ನೇಹ ತುಂಬ ಗಾಢವಾಯಿತು. ಅವರಿಬ್ಬರೂ ಒಬ್ಬರ ನ್ನೊಬ್ಬರು ಮದುವೆಯಾಗಲು ತಮ್ಮೊಳಗೆ ಪ್ರಮಾಣ ಮಾಡಿಕೊಂಡರು.

ಐದನೇದಿನ ಶೀಲಕುಮಾರನು ರಹಸ್ಯವಾಗಿ ಆ ಉದ್ಯಾನದಿಂದ ಹೊರಬಿದ್ದು, ತನ್ನ ಬಿಡದಿಗೆ ಹೋಗಿ ಕುದುರೆಯ ಮೇಲೇರಿಕೊಂಡು ಸ್ವದೇಶಕ್ಕೆ ತಲಪಿ, ಮನೆ ಸೇರಿದನು.

ಮಗನು ಕ್ಷೇಮವಾಗಿ ತಿರುಗಿ ಬಂದುದಕ್ಕೆ ರಾಜನಿಗೆ ಬಹಳ ಸಂತೋಷವಾಯಿತು. ಅವನು ಕುಮಾರನ ಮದುವೆಗಾಗಿ ಸಂಬಂಧ ನೋಡುವಂತೆ ಮಂತ್ರಿಯೊಂದಿಗೆ ಹೇಳಿದನು. ಶೀಲಕುಮಾರನು ತಾನು ಆರಿಸಿಕೊಂಡಿರುವ ಹುಡುಗಿಯನ್ನು ಕುರಿತು ತಂದೆಯೊಂದಿಗೆ ಹೇಳಲಿಲ್ಲ. ಅದಕ್ಕೆ ಕಾರಣವೇನೆಂದರೆ, ತಂದೆಯೊಡನೆ ಅವನಿಗೆ ಸಲಿಗೆ ಇರಲಿಲ್ಲ. ಶಾಲಿನಿ



ಚಿಕ್ಕದೊಂದು ರಾಜ್ಯದ ರಾಜಕುಮಾರಿ. ತಂದೆ ಏನೋ ಒಂದು ಕಾರಣ ಹೇಳಿ, ಶಾಲಿನಿಯನ್ನು ಅವನು ಮದುವೆಯಾಗಲು ಒಪ್ಪದೆಹೋದರೆ, ಮತ್ತೆ ಈ ಜನ್ಮದಲ್ಲಿ ಶೀಲಕುಮಾರನು ಅವಳನ್ನು ಮದುವೆಯಾಗಲಾರ. ಅಷ್ಟು ಖಂಡಿತ ಸ್ವಭಾವ ಅವನ ತಂದೆಯದೆಂಬುದನ್ನು ಅವನು ಬಲ್ಲ.

ಈ ಕಾರಣದಿಂದ ತನಗಾಗಿ ಸಂಬಂಧ ಹುಡುಕುವರೆಂಬ ಸಮಾಚಾರ ತಿಳಿದಮೇಲೆ ಶೀಲಕುಮಾರನು ಚಿಂತೆಯಿಂದ ನಿದ್ರಾಹಾರಗಳನ್ನು ಬಿಟ್ಟು ಕೃಶನಾಗ ತೊಡಗಿದ. ಮಂತ್ರಿಯ ಮಗನಾದ ದೇವದತ್ತನು ಶೀಲಕುಮಾರನಿಗೆ ಸ್ನೇಹಿತನಾಗಿದ್ದ. ಶೀಲಕುಮಾರನ ಮನೋವೇದನೆಯನ್ನು ಕುರಿತು ಎಲ್ಲರಿಗಿಂತ ಮೊದಲು ಅವನೇ ಕಂಡುಹಿಡಿದ. ದೇವದತ್ತನು ತುಂಬ ಒತ್ತಾಯ ಮಾಡಿ ಕೇಳಿದ ಮೇಲೆ, ಶೀಲಕುಮಾರನು ತನ್ನ ರಹಸ್ಯವಾದ ಪ್ರಣಯ ಕಥೆಯನ್ನು ಅವನೊಂದಿಗೆ ಹೇಳಿ, ತನ್ನ ಅಸಹಾಯ ಸ್ಥಿತಿಗಾಗಿ ತುಂಬ ಮರುಗಿದನು.

"ಇದಕ್ಕಾಗಿ ನೀನೇನೂ ಚಿಂತಿಸಬೇಡ. ಅಂತಹುದೇನಾದರೂ ಇಕ್ಕಟ್ಟಿನ ಸಮಸ್ಯೆ ಬಂದರೆ, ನಮ್ಮ ಆಸ್ಥಾನ ಐಂದ್ರಜಾಲಿಕನ ಸಹಾಯದಿಂದ ನೀನು ಶಾಲಿನಿಯನ್ನೇ ಮದುವೆಯಾಗುವ ಉಪಾಯವನ್ನು ಆಲೋಚನೆ ಮಾಡೋಣ" ಎಂದು ದೇವದತ್ತನು ಶೀಲಕುಮಾರನಿಗೆ ಅಭಯ ಹೇಳಿದನು.

ಹೀಗಿರುವಾಗ ಶೀಲಕುಮಾರನ ಮದುವೆಗಾಗಿ ಮಂತ್ರಿಯ ಏರ್ಪಾಡಿನಂತೆ ಅನೇಕ ದೇಶಗಳ ರಾಜರು ತಮ್ಮತಮ್ಮ ಕುಮಾರಿಯರನ್ನು ಶೀಲಕುಮಾರನಿಗೆ ಕೊಡುವ ಇಷ್ಟದಿಂದ ಸಮಾಚಾರಗಳನ್ನು ಕಳುಹಿಸಿಕೊಟ್ಟರು. ಹಾಗೆ ಕಳುಹಿಸಿದವರಲ್ಲಿ ಶಾಲಿನಿಯ ತಂದೆಯೂ ಇದ್ದನು.

ಆದರೆ ರಾಜನೂ ಮಂತ್ರಿಯೂ ಕೂಡಿ ತಮ್ಮ ಅಂತಸ್ತಿಗೆ ತಕ್ಕುದಾಗಿ ಆರಿಸಿದ ನಾಲ್ವರು ರಾಜಕುಮಾರಿಯರಲ್ಲಿ ಶಾಲಿನಿ ಇರಲಿಲ್ಲ. ಈ ಸಂಗತಿ ಮಂತ್ರಿಯಿಂದ ಅವನ ಮಗ ದೇವದತ್ತನಿಗೆ ತಿಳಿಯಿತು. ಈ ಸಂದರ್ಭದಲ್ಲಿ ಶೀಲಕುಮಾರನ ಕೋರಿಕೆ ಕೈಗೂಡಬೇಕಾದರೆ ಏನಾದರೂ ಇಂದ್ರಜಾಲ ಮಾಡದೆ ಗತ್ಯಂತರವಿಲ್ಲವೆಂದು ಅವನಿಗೆ ತೋರಿತು.

ರಾಜನು ತಾವು ಆರಿಸಿಕೊಂಡ ರಾಜಕುಮಾರಿಯರ ಜಾತಕಗಳನ್ನು ಜೋಯಿಸರಿಗೆ ತೋರಿಸಿ ಅಂತಿಮ ನಿರ್ಣಯಕ್ಕೆ ಬರೋಣವೆಂದು ಮಂತ್ರಿಯೊಂದಿಗೆ ಹೇಳಿದನು.

"ಮಹಾರಾಜರೆ, ನಮ್ಮ ಯುವರಾಜನ ಅಭಿಪ್ರಾಯವನ್ನು ಕೂಡಾ ತಿಳಿಯಬೇಕಾದುದು ಮುಖ್ಯವಲ್ಲವೆ?" ಎಂದು ಮಂತ್ರಿ ಕೇಳಿದ.

"ನನ್ನ ನಿರ್ಣಯವೇ ಅವನ ನಿರ್ಣಯ. ಅವನಾಗಿ ಏನೂ ಹೇಳಲಾರ" ಎಂದ ರಾಜ. ಮಗನನ್ನು ಮೊದಲಿನಿಂದಲೂ ತನ್ನ ಮಾಯ ಮಾತಿನೊಳಗೇ ಕಟ್ಟುಮಾಡಿಸಿಕೊಂಡಿದ್ದ ಆ ರಾಜ, ತಾನು ಹೇಳಿ



ದಂತೆ ಮಗ ನಡೆದುಕೊಳ್ಳುತ್ತಾನೆಂದೇ ತಿಳಿದಿದ್ದ. "ಅದೇನೋ ನಿಜವೇ ಮಹಾರಾಜರೆ, ಆದರೂ ಇದು ರಾಜಕೀಯ ವಿಷಯವಲ್ಲವಷ್ಟೆ? ಯುವ ರಾಜನ ಸ್ವಂತ ಇಷ್ಟಾನಿಷ್ಟಕ್ಕೆ ಸೇರಿದ್ದು. ಆತನ ಜೀವನಕ್ಕೆ ಸಂಬಂಧಪಟ್ಟದ್ದು. ಆತನನ್ನು ಒಂದು ಮಾತು ಕೇಳಲು ತಮ್ಮ ಅಪ್ಪಣೆಯಾಗಬೇಕು" ಎಂದ ಮಂತ್ರಿ. "ಸರಿ ಹಾಗೇ ಆಗಲಿ" ಎಂದು ರಾಜನು ಒಪ್ಪಿಕೊಂಡ. ಮಂತ್ರಿ ಶೀಲಕುಮಾರನ ಬಳಿಗೆ ದೇವದತ್ತನನ್ನು ಕಳುಹಿಸಿದ.

ದೇವದತ್ತನು ಶೀಲಕುಮಾರನ ಬಳಿಗೆ ಹೋಗಿ, ಅವನಿಗೆ ಮಾಡಬೇಕಾದ ಉಪಾಯ ಹೇಳಿ ಬಹಳ ಹೊತ್ತು ಬೋಧಿಸಿ, ಅವನನ್ನು ತನ್ನ ತಂದೆಯ ಬಳಿಗೆ ಕರೆದುಕೊಂಡು ಬಂದನು.

"ಮಹಾಮಂತ್ರಿಗಳೇ, ನನ್ನ ಹೃದಯ ಫಲಕದ ಮೇಲೆ ಯಾವಳು ನೆಲೆಸಿರುವಳೆಂಬುದನ್ನು ಹೇಗಾದರೂ ತಿಳಿದುಕೊಂಡು, ಅವಳೊಂದಿಗೆ ನನ್ನ ಮದುವೆಯನ್ನು ಮಾಡಿಸಿಬಿಡಿರಿ" ಎಂದನು ಶೀಲಕುಮಾರ. "ಅದು ನಿನಗಲ್ಲವೇ ಗೊತ್ತಿರಬೇಕು? ನೀನೇ ಅವಳ ಹೆಸರನ್ನು ಹೇಳಿಬಿಡು. ಅವಳೊಂದಿಗೆ ನಿನ್ನ ವಿವಾಹ ಮಾಡಲು ನನ್ನಿಂದಾದಷ್ಟು ಪ್ರಯತ್ನ ಪಡುತ್ತೇನೆ" ಎಂದ ಮಂತ್ರಿ.

"ನನಗೆ ತಿಳಿದರೆ ನಾನೇ ಹೇಳಿಬಿಡುತ್ತಿದ್ದೆ. ಅದು ನನಗೆ ತಿಳಿಯದು. ಹೇಗೆ ತಿಳಿಯುವುದೋ. ಅವಳಾರೋ ಎಂಬುದನ್ನೆಲ್ಲ ನೀವೇ ಕಂಡುಹಿಡಿದು ಮದುವೆ ಮಾಡಿಸಿರಿ" ಎಂದ ಶೀಲಕುಮಾರ. "ಇದು ಹೇಗೆ ಸಾಧ್ಯವಪ್ಪಾ?" ಎಂದು ಮಂತ್ರಿ ಹತಾಶನಾದ.

ಆಗ ದೇವದತ್ತನು ಹೀಗೆಂದ: "ಇದಕ್ಕೆ ಏನೋ ಒಂದು ಯೋಗಕ್ರಿಯೆ ಮಾಡಿ ಬಗೆಹರಿಸಬಹುದೆಂದು ಒಮ್ಮೆ ನಮ್ಮ ಮಾಯಾಧರರು ಹೇಳಿದ ಮಾತು ನೆನಪಿಗೆ ಬರುತ್ತವೆ. ಅವರನ್ನು ಒಂದು ಮಾತು ಕೇಳಿ ನೋಡೋಣ"

ಮಂತ್ರಿ ಇದಕ್ಕೆ ಆಮೋದಿಸಿ ಆಸ್ಥಾನ ಇಂದ್ರಜಾಲಿಕ ಮಾಯಾಧರನನ್ನು ಕರೆಯಿಸಿದನು. ಮಂತ್ರಿ ಅವನೊಂದಿಗೆ ಸಮಸ್ಯೆಯನ್ನು ವಿವರಿಸಿ ಹೇಳಿ, "ನಮ್ಮ ಯುವರಾಜನ ಹೃದಯ ಫಲಕದಲ್ಲಿ ನೆಲೆಸಿರುವ ಪ್ರೇಯಸಿ ಯಾವಳೆಂಬುದು ಅವನಿಗೆ ತಿಳಿಯದಿರುವಾಗ, ಉಳಿದವರು ತಿಳಿದುಕೊಳ್ಳುವುದು ಸಾಧ್ಯವೆ?" ಎಂದು ಕೇಳಿದ.

ಮಾಯಾಧರನು ಮುಗುಳುನಗುತ್ತ, "ಅದಕ್ಕೆ ಒಂದು ಯೋಗ ಸಂಬಂಧವಾದ ಕ್ರಿಯೆ ಮಾಡಬಹುದು. ಒಂದು ರಾತ್ರಿ ಪೂರಾ ಯುವರಾಜನು ನನ್ನ ಮನೆಯಲ್ಲಿ ಯೋಗ ಸಮಾಧಿಯಲ್ಲಿರಬೇಕು. ಮರುದಿನ ಬಹಿರಂಗ ಸಭೆಯಲ್ಲಿ ಎಲ್ಲರ ಸಮಕ್ಷಮ ಅವನ ಹೃದಯ ರಹಸ್ಯವು ಅವನಿಗೂ, ಉಳಿದವರಿಗೂ ಸ್ಪಷ್ಟವಾಗಿ ತಿಳಿಯುವ ಹಾಗೆ ಮಾಡಬಹುದು. ಆಮೇಲೆ ಮಾತ್ರ ಅವಳೊಂದಿಗೆ ಅವನ ಮದುವೆ

ಯಾಗಲೇ ಬೇಕು. ತಪ್ಪಿದರೆ ಅವನು ಉನ್ಮಾದಿಯಾಗಿ ಯಾವ ಕೆಲಸಕ್ಕೂ ಅನರ್ಹನಾಗುವನು. ನೀವೂ ಮಹಾರಾಜರೂ ಇದಕ್ಕೆ ಒಪ್ಪಿಕೊಂಡರೆ, ನಾನು ಯೋಗ ಶಕ್ತಿಯನ್ನು ಪ್ರಯೋಗ ಮಾಡಲು ಸಿದ್ಧನಾಗುತ್ತೇನೆ" ಎಂದನು.

ಮಂತ್ರಿ ಈ ಸಂಗತಿಯನ್ನು ರಾಜನೊಂದಿಗೆ ಹೇಳಿದನು. ಅದನ್ನು ಕೇಳಿ ರಾಜನಿಗೆ ಆಶ್ಚರ್ಯದೊಂದಿಗೆ ಅನುಮಾನ ಕೂಡಾ ಉಂಟಾಯಿತು. ತನ್ನ ಕುಮಾರನ ಮದುವೇ ವಿಷಯ ಹೇಗಾದರೂ ಆಗಲಿ, ಮಾಯಾಧರನ ಯೋಗ ವಿದ್ಯೆಯ ಅದ್ಭುತವನ್ನು ಕಣ್ಣಾರೆ ಕಾಣಬೇಕೆಂಬ ಬಯಕೆಯಿಂದ ರಾಜನು ಯೋಗಕ್ರಿಯೆಗೆ ಅನುಮತಿ ನೀಡಿದನು.

ಅದರಂತೆ ಒಂದುದಿನವಿಡೀ ಶೀಲಕುಮಾರನು ಐಂದ್ರಜಾಲಿಕನ ಮನೆಯಲ್ಲೇ ಇದ್ದನು. ಮರುದಿನ ಅವನನ್ನು ತುಂಬಿದ ಸಭೆಗೆ ಕರೆತಂದರು. ಮಂತ್ರಿ ರಾಜಕುಮಾರಿಯರ ಹೆಸರುಗಳನ್ನೆಲ್ಲಾ ಒಂದು ಕಾಗದದಲ್ಲಿ ಬರೆದು ಸಭಿಕರು ಕೇಳಿಸುವಂತೆ ಗಟ್ಟಿಯಾಗಿ ಓದಿ, ಕಾಗದವನ್ನು ಐಂದ್ರಜಾಲಿಕನ ಕೈಗೆ ಕೊಟ್ಟನು.

ಐಂದ್ರಜಾಲಿಕನು ಆ ಕಾಗದವನ್ನು ಒಂದು ಹರಿವಾಣದಲ್ಲಿಟ್ಟು ಬೆಂಕಿ ಹಚ್ಚಿ ಸುಟ್ಟು ಕರಿ ಮಾಡಿ, ಆ ಬೂದಿಯನ್ನು ಎಚ್ಚರಿಕೆಯಿಂದ ತನ್ನ ಕೈಯಲ್ಲಿ ತೆಗೆದುಕೊಂಡು ಯುವರಾಜನಿಗೆ ಅಂಗಿ ತೆಗೆಯಲು ಹೇಳಿದನು. ತರುವಾಯ ಅವನು ಶೀಲಕುಮಾರನ ಎದೆಯ ಮೇಲೆ ಕಾಗದದ ಬೂದಿಯನ್ನು ಹಚ್ಚಿ ಉಜ್ಜಿದನು. ಆಗ ಯುವರಾಜನ ಹೃದಯ ಪ್ರದೇಶದಲ್ಲಿ 'ಶಾಲಿನಿ' ಎಂಬ ಅಕ್ಷರಗಳು ಎದ್ದು ಕಾಣಿಸಿದುವು. ಎಲ್ಲರೂ ಉತ್ಸಾಹದಿಂದ ಕೂಗಾಡಿದರು.

"ಇನ್ನುಳಿದ ಕೆಲಸ, ನನ್ನದಲ್ಲ, ನಿಮ್ಮದು" ಎಂದು ಮಂತ್ರಿಗೆ ಹೇಳಿ ಮಾಯಾಧರನು ತನ್ನ ಆಸನದಲ್ಲಿ ಕುಳಿತುಬಿಟ್ಟನು.

ರಾಜನು ತನ್ನ ಕುಮಾರನಿಗೆ ಶಾಲಿನಿಯೊಂದಿಗೆ ಮದುವೆ ಮಾಡಿಸಿ: ತನ್ನ ಮಾತನ್ನು ಉಳಿಸಿಕೊಂಡನು. ವಿವಾಹ ನಡೆದ ರಾತ್ರಿ ಶೀಲಕುಮಾರನು ಶಾಲಿನಿಗೆ ಒಂದು ತುಂಡು ಸಾಬೂನನ್ನು ಬಹುಮಾನವಾಗಿ ಇತ್ತನು. ಶಾಲಿನಿಗೆ ಆಶ್ಚರ್ಯವಾಯಿತು.

"ಇದೆಂಥ ಬಹುಮಾನ ? ವಿಚಿತ್ರವಾಗಿದೆಯಲ್ಲಾ! ಇದಕ್ಕಿಂತ ಬೆಲೆ ಬಾಳುವಂಥಾದ್ದು ನಿಮಗೆ ಸಿಗಲಿಲ್ಲವೆ ?" ಎಂದು ಕೇಳಿದಳು ಶಾಲಿನಿ.

"ಈ ಸಾಬೂನಿನ ಸಹಾಯದಿಂದಲೇ ನಾನು ನಿನ್ನನ್ನು ಮದುವೆಯಾದೆ. ಮಾಯಾಧರನು ಸಾಬೂನಿನಿಂದ ನಿನ್ನ ಹೆಸರನ್ನು ನನ್ನ ಹೃದಯದ ಮೇಲೆ ಬರೆದು. ಅದರ ಮೇಲೆ ಮಸಿ ಹಚ್ಚಿ ಯೋಗಕ್ರಿಯೆ ಎಂದು ನಂಬಿಸದಿದ್ದರೆ, ನನ್ನ ತಂದೆ ನಿನ್ನನ್ನು ನನಗೆ ಮಾಡಿಸುತ್ತಿರಲಿಲ್ಲ" ಎಂದ ಶೀಲಕುಮಾರ.



# ಪಂದ್ಯ

**ಕಾಂ**ಚನಪುರದ ರಾಜನೂ ಧರ್ಮಾತ್ಮ, ಪ್ರಜೆಗಳೂ ತುಂಬ ಧರ್ಮಾತ್ಮರು. ಆದರೆ ರಾಜನಿಗೆ ಸಂತಾನವಿರಲಿಲ್ಲ; ಅದಕ್ಕಾಗಿ ರಾಜನೊಂದಿಗೆ ಪ್ರಜೆಗಳೂ ಬಹಳ ಬಾಧೆ ಪಡುತ್ತಿದ್ದರು.

ಅನೇಕ ಮಂದಿ ಧರ್ಮಾತ್ಮರ ನಡುವೆ ಒಬ್ಬ ದುಷ್ಟನು ಲಾಭ ಹೊಂದಬಲ್ಲನು. ಅಂತಹ ದುಷ್ಟನೊಬ್ಬ ರಾಜಧಾನಿಯಲ್ಲಿದ್ದ.

ಒಂದುದಿನ ಆ ವರ್ತಕ ತನ್ನ ನೆರೆಯಲ್ಲಿದ್ದ ಒಬ್ಬ ಬಡವನೊಂದಿಗೆ, "ನಾನೊಬ್ಬ ಮಾಂತ್ರಿಕ ನನ್ನು ಬಲ್ಲೆ. ಅವನು ನಿನ್ನ ಮನಸ್ಸಿನಲ್ಲಿದ್ದುದನ್ನು ಹೇಳುವನು. ಹತ್ತು ವರಹಗಳನ್ನು ನನಗೆ ಕೊಟ್ಟರೆ ನಿನ್ನನ್ನು ಅವನ ಬಳಿಗೆ ಕರೆದೊಯ್ಯುತ್ತೇನೆ" ಎಂದನು.

"ಇದಕ್ಕೆ ಮಾಂತ್ರಿಕನೇಕೆ ? ನಿಮ್ಮ ಮನಸ್ಸಿನಲ್ಲಿರುವುದನ್ನು ನಾನೇ ಹೇಳುತ್ತೇನೆ" ಎಂದ ಬಡವ. "ಪಂದ್ಯ ಕಟ್ಟುವಿಯಾ ?" ಎಂದು ವರ್ತಕನು ಕೇಳಲು, "ಸರಿ, ನಿಮ್ಮ ಮನಸ್ಸಿನಲ್ಲಿರುವು ದನ್ನು ನಾನು ಹೇಳದೆ ಹೋದರೆ ನನಗಿರುವುದನ್ನೆಲ್ಲಾ ನಿಮಗೆ ಕೊಡುತ್ತೇನೆ. ಹೇಳಿದರೆ ನಿಮ ಗಿರುವುದೆಲ್ಲಾ ನನಗೆ ಕೊಡುವಿರಾ ?" ಎಂದು ಕೇಳಿದ ಬಡವ. ಇದಕ್ಕೆ ವರ್ತಕನು ಒಪ್ಪಿದ.

"ನಮಗೆ ಮಧ್ಯವರ್ತಿ ಬೇಕು, ರಾಜನ ಬಳಿಗೆ ಹೋಗೋಣ" ಎಂದ ಬಡವ. ಹಾಗೆ ಇಬ್ಬರೂ ರಾಜನ ಬಳಿಗೆ ಹೋಗಿ ತಮ್ಮ ಪಂದ್ಯದ ಸಂಗತಿ ಹೇಳಿದರು.

"ರಾಜನಿಗೆ ಸಂತಾನವಾಗಲಿ ಎಂದು ನಿಮ್ಮ ಮನಸ್ಸಿನಲ್ಲಿದೆ; ಹೌದೆ ?" ಎಂದ ಬಡವ. ನಿಜವೆಂದು ಒಪ್ಪಿಕೊಂಡು. ವರ್ತಕನು ತನಗಿರುವುದನ್ನೆಲ್ಲಾ ಬಡವನಿಗೆ ಒಪ್ಪಿಸಿಬಿಟ್ಟನು.






**ಪಾಂ**ಡವರೈವರೂ, ದ್ರೌಪದಿಯೂ ವಿರಾಟ ರಾಜನ ಬಳಿಯಲ್ಲಿ ಗುಟ್ಟಾಗಿ ಅಜ್ಞಾತವಾಸ ಮಾಡಿಕೊಂಡಿದ್ದರು. ತಮ್ಮ ವೇಷಗಳನ್ನು ಮರೆಸಿಕೊಂಡು ಅದಕ್ಕೆ ಸ್ವಲ್ಪ ಕೂಡ ವ್ಯತ್ಯಾಸ ಬಾರದಂತೆ ಬಹಳ ಜಾಗರೂಕತೆಯಿಂದಿದ್ದರು. ಧರ್ಮರಾಜನು ಪಗಡೆಯಾಟದಲ್ಲಿ ಹಣವನ್ನು ಗೆದ್ದು, ಆ ಹಣವನ್ನು ತನ್ನ ತಮ್ಮಂದಿರಿಗೆ ಹಂಚಿಕೊಡುತ್ತಿದ್ದನು. ಭೀಮನು ಅಡಿಗೆ ಮಾಡಿದ ಆಹಾರ ಪದಾರ್ಥಗಳನ್ನು ಉಳಿದವರಿಗೂ ಕೊಡುತ್ತಿದ್ದನು. ಅರ್ಜುನನು ಅಂತಃಪುರದಲ್ಲಿ ತನಗೆ ಸಿಗುವ ಹಳೆಯ ಬಟ್ಟೆಗಳನ್ನು ಎಲ್ಲರಿಗೂ ತಲಪಿಸುತ್ತಿದ್ದನು. ನಕುಲನು ತಾನು ಮಾಡುವ ಕುದುರೆಗಳ ಪರಿಪಾಲನೆಗೆ ಮೆಚ್ಚಿ ರಾಜನು ಕೊಡುವ ಬಹುಮಾನಗಳನ್ನು ಉಳಿದವರಿಗೆ ಹಂಚಿ ಕೊಡುತ್ತಿದ್ದನು. ಸಹದೇವನು ಹಾಲು ಮೊಸರುಗಳನ್ನು ಎಲ್ಲರಿಗೂ ಒಪ್ಪಿಸುತ್ತಿದ್ದನು. ದ್ರೌಪದಿ ತನ್ನ ಐವರು ಗಂಡಂದಿರನ್ನೂ ನೋಡಿಕೊಳ್ಳುತ್ತ, ತನ್ನ ರಹಸ್ಯವು ಬಯಲಾಗದಂತೆ ಬಹು ಜಾಗರೂಕಳಾಗಿದ್ದಳು. ತಮ್ಮ ಗುರುತು ಎಲ್ಲಿ ದುರ್ಯೋಧನನಿಗೆ ತಿಳಿದು ಬಿಡುತ್ತದೋ ಎಂಬ ಭಯ ಅವರೆಲ್ಲರ ಹೃದಯದಲ್ಲಿಯೂ ಎಚ್ಚರವಾಗಿದ್ದಿತು.

ಈ ರೀತಿಯಾಗಿ ನಾಲ್ಕು ತಿಂಗಳು ಕಳೆದು ಹೋಯಿತು. ಆಗ ಮತ್ಸ್ಯ ದೇಶದಲ್ಲಿ ಬ್ರಹ್ಮೋತ್ಸವವು ಬಂದಿತು. ಆ ಉತ್ಸವಕ್ಕೆ ದೇಶದೇಶಗಳಿಂದ ದೊಡ್ಡ ದೊಡ್ಡ ಮಲ್ಲರು ಬರುತ್ತಿದ್ದರು. ವಿರಾಟ ರಾಜನು ಅವರ ನಡುವೆ ಯುದ್ಧಗಳ ಏರ್ಪಾಡು ಮಾಡಿ, ನೋಡಿ ಆನಂದಗೊಳ್ಳುತ್ತಿದ್ದನು.

ಈ ಸಾರಿ ಹಾಗೆ ಬಂದ ಮಲ್ಲರಲ್ಲಿ ಜೀಮೂತನೆಂಬವನು ಎಲ್ಲರನ್ನೂ ಮೀರಿಸಿದಂತಹ ಬಲಶಾಲಿಯಾಗಿದ್ದ. ಅಂತೆಯೇ ಅವನು ಬಹಳ ಗರ್ವದಿಂದ ಎಲ್ಲರನ್ನೂ ತನ್ನೊಂದಿಗೆ ಯುದ್ಧ ಮಾಡಲು ಬನ್ನಿರೆಂದು ಕರೆಯುತ್ತಿದ್ದನು. ಆದರೆ ಉಳಿದ ಮಲ್ಲರು ಅವನೊಂದಿಗೆ ಯುದ್ಧ ಮಾಡಲು ಹೆದರುತ್ತಿದ್ದರು. ಆದುದರಿಂದ ವಿರಾಟ ರಾಜನು ತನ್ನ ಅಡಿಗೆಯವನಾದ ಭೀಮನನ್ನು ಕರೆದು, ಜೀಮೂತನೊಂದಿಗೆ

೩೯. ಕೀಚಕನ ವಿಜೃಂಭಣೆ



ಮಲ್ಲಯುದ್ಧ ಮಾಡುವಂತೆ ಹೇಳಿದನು. ರಾಜನು ಹೇಳುವಾಗ ಸಾಧ್ಯವಿಲ್ಲವೆನ್ನುವುದು ಚೆನ್ನಾಗಿಲ್ಲವೆಂದು ಕೊಂಡು, ಭೀಮನು ಅದಕ್ಕೆ ಒಪ್ಪಿದನು.

ಆಮೇಲೆ ಗೊತ್ತು ಮಾಡಲ್ಪಟ್ಟ ಸಮಯದಲ್ಲಿ ಭೀಮನೂ ಜೀಮೂತನೂ ಎರಡು ಮದ್ದಾನೆಗಳ ಹಾಗೆ ಮಲ್ಲಯುದ್ಧವನ್ನು ಪ್ರಾರಂಭಿಸಿದರು. ಈ ವರೆಗೂ ನೋಡದಿರುವಂತಹ ದಾರುಣವಾದ ಮಲ್ಲ ಯುದ್ಧವು ಎಲ್ಲರಿಗೂ ಕಣ್ಣಿಗೆ ಹಬ್ಬವಾಯಿತು. ಪ್ರೇಕ್ಷಕರೆಲ್ಲ ಪರಮಾನಂದ ಗೊಂಡರು. ಭೀಮನು ಜಗಜಟ್ಟಿಯಾದ ಜೀಮೂತನನ್ನು ಹಿಡಿದುಕೊಂಡು ಗಿರಗಿರನೆ ತಿರುಗಿಸಿದಾಗ. ಉಳಿದ ಮಲ್ಲರಿಗೆಲ್ಲ ದಿಗ್ಭ್ರಮೆಯಾಯಿತು. ಭೀಮನು ಜೀಮೂತನನ್ನು ಹಾಗೆ ಲೀಲಾಜಾಲವಾಗಿ ತಿರುಗಿಸಿ ತಿರುಗಿಸಿ ನೆಲಕ್ಕೆ ಅಪ್ಪಳಿಸಿ ಕೊಂದುಬಿಟ್ಟನು. ಬಲಗರ್ವಿತನಾದ ಜೀಮೂತನನ್ನು ಜಯಿಸಿದ ಭೀಮನಿಗೆ ವಿರಾಟ ರಾಜನು ಹೇರಳ ಧನವನ್ನು ಕಾಣಿಕೆಯಾಗಿ ಕೊಟ್ಟನು.

ಭೀಮನ ಶಕ್ತಿಸಾಮರ್ಥ್ಯಗಳನ್ನು ನೋಡಿದ ವಿರಾಟರಾಜನು ಅವನನ್ನು ಸಿಂಹಗಳೊಂದಿಗೂ, ಮದ್ದಾನೆಗಳೊಂದಿಗೂ, ಹುಲಿಗಳೊಂದಿಗೂ ಜಗಳ ವಾಡಿಸಿ ವಿನೋದಿಸಿಕೊಳ್ಳುವುದು ಸಾಧಾರಣ ವಿಷಯ ವಾಯಿತು. ಈ ಹೋರಾಟಗಳನ್ನು ನೋಡಲು ಅಂತಃಪುರ ಸ್ತ್ರೀಯರು ಕೂಡಾ ಬರುತ್ತಿದ್ದರು.

ಅರ್ಜುನನು ಅಂತಃಪುರ ಸ್ತ್ರೀಯರಿಂದ ಸಂಗೀತ ವನ್ನು ಹಾಡಿಸಿ, ನಾಟ್ಯಗಳನ್ನು ಆಡಿಸಿ ರಾಜನಿಗೆ ಸಂತೋಷವನ್ನುಂಟು ಮಾಡುತ್ತಿದ್ದನು. ಸೊಕ್ಕಿದ ಕುದುರೆಗಳನ್ನು ಸ್ವಾಧೀನಕ್ಕೆ ತರುವುದರಲ್ಲಿ ನಕುಲನು ಗಟ್ಟಿಗ. ಅಂತಹ ಕುದುರೆಗಳನ್ನು ಸಾಧುಗೊಳಿಸಿ, ಕಡಿವಾಣ ತಗಲಿಸಿ ರಾಜನಿಗೆ ತೋರಿಸಿ ನಕುಲನು ಬಹಳ ಧನವನ್ನು ಬಹುಮಾನವಾಗಿ ಪಡೆದನು. ಹಾಗೆಯೇ ಸಹದೇವನು ಕೂಡಾ ಪೊಗರಿನ ಗೂಳಿ ಗಳನ್ನು ಅಡಗಿಸಿ ಸಾಧುಮಾಡಿ ಅನೇಕ ಬಹುಮಾನ ಗಳನ್ನು ಸಂಪಾದಿಸಿದನು. ಹೀಗೆಲ್ಲಾ ತನ್ನ ಗಂಡಂದಿರು ಸೇವಕರಾಗಿ ಕಷ್ಟಪಡುತ್ತಿರುವುದನ್ನು ನೋಡಿ ದ್ರೌಪದಿ ಬಹಳ ಸಂಕಟಪಡುತ್ತಿದ್ದಳು.

ಈ ವಿಧವಾಗಿ ಪಾಂಡವರ ಅಜ್ಞಾತವಾಸವು ಒಂದುವರ್ಷದ ಕೊನೆಯ ಹಂತದವರೆಗೆ ಬಂದು ಬಿಟ್ಟಿತು. ಆ ಸಮಯದಲ್ಲಿ ದ್ರೌಪದಿಯ ಪಾಲಿಗೆ ಸಿಂಹ ಬಲದ ಕೀಚಕನೆಂಬವನೊಬ್ಬ ಗಂಟುಬಿದ್ದನು. ಈ ಕೀಚಕ ವಿರಾಟ ರಾಜನಿಗೆ ಬಾವನಾಗಬೇಕು. ಅವನೇ ವಿರಾಟನ ಮುಖ್ಯ ಸೇನಾಧಿಪತಿಯಾಗಿಯೂ ಇದ್ದನು. ಇವನು ಸುಧೇಷ್ಣೆಯ ಮನೆಯಲ್ಲಿರುವ ದ್ರೌಪದಿಯನ್ನು ನೋಡಿ ಮೋಹ ಪರವಶನಾಗಿ ತನ್ನ ತಂಗಿಯೊಂದಿಗೆ, "ಯಾರಿವಳು ? ಇಲ್ಲಿ ಇವಳನ್ನು ಈವರೆಗೂ ನೋಡಲಿಲ್ಲವಲ್ಲ ? ಇವಳ ಸೌಂದರ್ಯ ನನ್ನನ್ನು ಸಮ್ಮೋಹನ ಗೊಳಿಸಿಬಿಟ್ಟಿದೆ. ಅಪ್ಸರೆ ಯಂತಹ ಈ ದಿವ್ಯಸುಂದರಿ ಎಲ್ಲಿಂದ ಬಂದಳು ? ಇಂತಹ ಸೌಂದರ್ಯದ ರಾಶಿಯಿಂದ ಚಾಕರಿ ಮಾಡಿ



ಸುವುದೆಂದರೇನು ? ಇವಳು ನನ್ನ ಮನೆಗೆ ಬಂದರೆ ಹೂವಿನಲ್ಲಿಟ್ಟು ಪೂಜಿಸುತ್ತೇನೆ" ಎಂದನು.

ಅವಳ ವಿಷಯದಲ್ಲಿ ಹಾಗೆಲ್ಲಾ ಮಾತಾಡಬಾರದೆಂದು ಸುಧೇಷ್ಣೆ ಹೇಳಿದರೂ ಕೀಚಕನು ಕೇಳಲಿಲ್ಲ. ಅವನು ಸುಧೇಷ್ಣೆಯ ಬಳಿಯಿಂದ ಹೊರಟು, ದ್ರೌಪದಿ ಒಬ್ಬಳೇ ಇರುವ ಸಮಯ ನೋಡಿ, ಅವಳಿಗೆ ತನ್ನ ಕೋರಿಕೆಯನ್ನು ತಿಳಿಸಿದನು.

ಆಗ ದ್ರೌಪದಿ ಅವನೊಂದಿಗೆ "ನನ್ನ ಹತ್ತಿರ ಹೀಗೆ ಮಾತಾಡುವುದು ತಪ್ಪು. ನಾನು ಇನ್ನೊಬ್ಬರ ಹೆಂಡತಿ. ನನ್ನನ್ನು ಕೋರುವುದರಿಂದ ನಿನಗೆ ಕೇಡು ಬರುತ್ತದೆ" ಎಂದಳು.

"ನನ್ನನ್ನು ಹೀಗೆ ನಿರ್ಲಕ್ಷ್ಯದಿಂದ ಕಾಣಬೇಡ. ಆಮೇಲೆ ನಿನಗೇ ಪಶ್ಚಾತ್ತಾಪವಾದೀತು. ನನ್ನನ್ನು ಸಾಮಾನ್ಯನೆಂದು ತಿಳಿಯಬೇಡ. ಈ ರಾಜನಿಗೂ ರಾಜ್ಯಕ್ಕೂ ನಾನೇ ಆಧಾರವಾಗಿದ್ದೇನೆ. ಭೋಗಭಾಗ್ಯಗಳಲ್ಲಿಯೂ, ರೂಪದಲ್ಲಿಯೂ, ಯೌವನದಲ್ಲಿಯೂ ನನ್ನನ್ನು ಮೀರಿಸಿದವರು ಈ ಲೋಕದಲ್ಲಿಲ್ಲ. ಅಂತಹ ನನ್ನನ್ನು ನಿನ್ನ ಸೇವಕನನ್ನಾಗಿ ಮಾಡಿಕೊಂಡು, ವಿವಿಧ ಭೋಗಗಳನ್ನು ಅನುಭವಿಸುವುದು ಬಿಟ್ಟು, ಗತಿಗೆಟ್ಟ ದಾಸಿಯ ಜೀವನ ನಿನಗೆ ತರವಲ್ಲ" ಎಂದ ಕೀಚಕ.

ದ್ರೌಪದಿ ಕೋಪದಿಂದ, "ನನ್ನ ಮೇಲಿನ ಮೋಹವನ್ನು ಬಿಟ್ಟು ಕೊಡದೆ ಹೋದರೆ ನಿನ್ನ ಪ್ರಾಣಕ್ಕೆ ಸಂಚಕಾರ ಬರುತ್ತದೆ. ನನ್ನ ಗಂಡಂದಿರಾದ ಐದು ಮಂದಿ ಗಂಧರ್ವರು ನನ್ನನ್ನು ರಾತ್ರೀ ಹಗಲೂ ನೋಡಿಕೊಂಡೇ ಇರುತ್ತಾರೆ. ಅವರಿಗೆ ನಿನ್ನ ಸಂಗತಿ ತಿಳಿದರೆ ನಿನಗೆ ಮರಣ ತಪ್ಪದು" ಎಂದಳು.

ದ್ರೌಪದಿಯ ಮಾತುಗಳು ಕೀಚಕನಿಗೆ ಸ್ವಲ್ಪ ಕೂಡ ನಾಟಲಿಲ್ಲ. ಅವನ ಉತ್ಸಾಹ ಕಡಮೆಯಾಗಲೂ ಇಲ್ಲ. ಅವನಿಗೆ ಅವಳ ಮೇಲಿನ ಮೋಹ ನಿಮಿಷ ನಿಮಿಷಕ್ಕೂ ಹೆಚ್ಚಾಗತೊಡಗಿತು. ಅವನು ತಾಳ್ಮೆಗೆಟ್ಟು ಸುಧೇಷ್ಣೆಯ ಬಳಿಗೆ ಹೋಗಿ, "ಹೇಗಾದರೂ ಆ ಸೈರಂಧ್ರಿಯನ್ನು ನನಗೆ ದಕ್ಕಿಸದೆ ಹೋದರೆ ನನ್ನ ಜೀವ ಈ ದೇಹ ಬಿಟ್ಟು ಹೊರಟು ಹೋಗುತ್ತದೆ. ನಾನು ಎಷ್ಟು ಬಗೆಯಾಗಿ ಪ್ರಾರ್ಥಿಸಿದರೂ ಅವಳ ಮನಸ್ಸು ನನ್ನ ಕಡೆಗೆ ತಿರುಗುವುದಿಲ್ಲ, ಹೇಗಾದರೂ ಅವಳನ್ನು ಒಪ್ಪಿಸು" ಎಂದು ಒತ್ತಾಯಿಸಿದನು.

ಸುಧೇಷ್ಣೆ ಅಣ್ಣನ ದುಃಸ್ಥಿತಿಯನ್ನು ನೋಡಿ ಬಹಳ ಸಂಕಟಪಡುತ್ತ, "ಸೈರಂಧ್ರಿ ನನ್ನ ಆಶ್ರಯದಲ್ಲಿರುವವಳು. ಅವಳನ್ನು ರಕ್ಷಿಸುವೆನೆಂದು ನಾನು ಮಾತು ಕೊಟ್ಟಿದ್ದೇನೆ. ತನಗೆ ಐದು ಮಂದಿ ಗಂಧರ್ವರು ಗಂಡಂದಿರೆಂದೂ ಅವಳು ಹೇಳಿದ್ದಾಳೆ. ಅಣ್ಣನಾದುದರಿಂದಲೇ ಈ ರಹಸ್ಯವನ್ನು ನಿನಗೆ ಹೇಳಿದ್ದೇನೆ. ಸೈರಂಧ್ರಿಯ ಮೇಲೆ ಭ್ರಮೆಯಿಟ್ಟುಕೊಂಡು ಪ್ರಾಣಕ್ಕೆ ತಂದುಕೊಳ್ಳಬೇಡ, ಅಣ್ಣಾ" ಎಂದಳು.

"ಸಾವಿರ ಮಂದಿ ಗಂಧರ್ವರಿದ್ದರೂ ನನ್ನನ್ನೇನೂ ಮಾಡಲಾರರು. ನನ್ನಂತಹ ಸುಂದರ ಪುರುಷನನ್ನು ಎಂತಹ ಪತಿವ್ರತೆಯಾದರೂ ಕೋರದಿರಲಾರಳು.

ನನ್ನ ವೈಭವಗಳನ್ನು ಕಣ್ಣಾರೆ ನೋಡಿದರೆ ಸೈರಂಧ್ರಿಯ ಮನಸ್ಸು ನನ್ನ ಮೇಲೆ ನಿಶ್ಚಯವಾಗಿಯೂ ಪ್ರಸನ್ನ ವಾಗುತ್ತದೆ. ಹೇಗಾದರೂ ಅವಳನ್ನು ನನ್ನ ಬಳಿಗೆ ಕಳಿಸಲೇ ಬೇಕು" ಎಂದು ಕೀಚಕನು ತಂಗಿಯನ್ನು ಪ್ರಾರ್ಥಿಸತೊಡಗಿದನು.

"ಎಲವೋ, ಪಾಪಿಯೆ! ನೀನು ತಪ್ಪು ಕೆಲಸಕ್ಕೆ ತಲೆಹಾಕುವುದು ಮಾತ್ರವಲ್ಲದೆ, ನನ್ನನ್ನೂ ಅದಕ್ಕೆ ಸಾಧನವಾಗಿ ಉಪಯೋಗಿಸಲು ನೋಡುವಿಯಾ? ನಿನ್ನ ಪಾಪವು ನಿನ್ನೊಬ್ಬನೊಂದಿಗೆ ಹೋಗಲಾರದು. ಕುಲವನ್ನೆ ನಾಶಮಾಡಬಲ್ಲದು. ಇದಕ್ಕೆಲ್ಲಾ ಸಿದ್ಧ ನಾದರೆ ಮನೆಗೆ ಹೋಗಿ, ಮಧುರಾನ್ನ ಪಾನೀಯ ಗಳನ್ನು ಸಿದ್ಧಪಡಿಸಿ ಇಡು. ಅವುಗಳನ್ನು ತೆಗೆದು ಕೊಂಡು ಬರಲು ಸೈರಂಧ್ರಿಯನ್ನು ಕಳುಹಿಸುತ್ತೇನೆ. ಅವಳನ್ನು ಹೇಗೆ ವಶಪಡಿಸಿಕೊಳ್ಳುವಿಯೋ ಅದೆಲ್ಲಾ ನಿನಗೇ ಸೇರಿದ್ದು" ಎಂದಳು ಸುಧೇಷ್ಣೆ.

ಕೀಚಕನು ಸಂತೋಷದಿಂದ ಕೂಡಲೇ ತನ್ನ ಮನೆಗೆ ಹೋಗಿ ಭಕ್ಷ್ಯಭೋಜ್ಯ ಪಾನೀಯಗಳನ್ನು ತಯಾರು ಮಾಡಿಸಿ, ದ್ರೌಪದಿಯ ಬರುವಿಕೆಯನ್ನು ಕಾದು ನೋಡತೊಡಗಿದನು.

ತರುವಾಯ ಸುಧೇಷ್ಣೆ ದ್ರೌಪದಿಯನ್ನು ಕರೆದು, "ಸೈರಂಧ್ರೀ, ನನಗೆ ಬಹಳ ದಾಹವಾಗಿದೆ. ನೀನು ಕೀಚಕನ ಮನೆಗೆ ಹೋಗಿ ಕುಡಿಯಲಿಕ್ಕೆ ಏನನ್ನಾದರೂ ತೆಗೆದುಕೊಂಡು ಬಾ" ಎಂದು ಆಜ್ಞಾಪಿಸಿದಳು.

"ಅಮ್ಮಾ, ನಾನು ಅವನ ಮನೆಗೆ ಮಾತ್ರ ಹೋಗಲಾರೆ. ಅವನು ಮೋಹಪರವಶತೆಯಲ್ಲಿ ಬಿದ್ದು ಹೊಡೆದುಕೊಂಡು ಹೋಗುವ ಸಂಗತಿ ನಿನಗೆ ಗೊತ್ತಿಲ್ಲದಿದ್ದೀತೆ? ನಾನು ಹೋದರೆ ಅವನು ನನ್ನನ್ನು ಅವಮಾನಗೊಳಿಸುತ್ತಾನೆ. ಬೇರೆ ಯಾರನ್ನಾದರೂ ಕಳುಹಿಸು." ಎಂದಳು ದ್ರೌಪದಿ.

"ಅವನ ಹತ್ತಿರ ಇರುವ ಒಳ್ಳೆಯ ಮಧುವನ್ನಿಷ್ಟು ನಿನ್ನ ಕೈಯಿಂದಲೇ ತರಿಸಿ ಕುಡಿಯಬೇಕೆಂದು ನಾನು



ಹೇಳುತ್ತಿದ್ದರೆ ನೀನೇಕೆ ಹೆದರುವೆ? ನನ್ನ ಕಡೆಯವ ಳಾದ ನಿನ್ನನ್ನು ಆತನು ಹೇಗೆ ಮುಟ್ಟುವನು?" ಎಂದು ಹೇಳಿ ಸುಧೇಷ್ಣೆ ದ್ರೌಪದಿಗೆ ಬಂಗಾರದ ಪಾತ್ರವನ್ನು ಕೊಟ್ಟಳು.

ದ್ರೌಪದಿ ಗತ್ಯಂತರವಿಲ್ಲದೆ ಆ ಪಾತ್ರವನ್ನು ತೆಗೆದು ಕೊಂಡು ಕೀಚಕನ ಮನೆಗೆ ಹೋದಳು. ಅವಳನ್ನು ನೋಡಿದ ಕೂಡಲೇ ಕೀಚಕನು ಅತ್ಯಂತ ಸಂತೋಷ ದಿಂದ ಮುಂದೆ ಬಂದು, "ಬಾ, ಸುಂದರೀ, ನಿನಗೆ ಸುಸ್ವಾಗತ. ನನ್ನ ಪ್ರಾಣೇಶ್ವರಿಯಾದ ನೀನು ನನ್ನ ಬಳಿಗೆ ಬಂದೆ! ಬಾ, ನನ್ನ ಕೋರಿಕೆಗಳನ್ನು ಈಡೇರಿಸು. ಇಲ್ಲಿರುವ ದಿವ್ಯಾಂಬರಗಳನ್ನು ಧರಿಸಿಕೋ. ರತ್ನಾಭರಣಗಳಿಂದ ಅಲಂಕಾರ ಮಾಡಿಕೋ. ನನ್ನೊಂದಿಗೆ ಕೂಡಿ ಮಧುಪಾನ ಮಾಡು. ಸುಖ ಸಂತೋಷದಲ್ಲಿ ಲೋಲಾಡು" ಎಂದನು.

"ಮಹಾರಾಣಿ ಮಧುವನ್ನು ತರಲು ನನ್ನನ್ನು ಕಳಿಸಿದ್ದಾಳೆ. ಆಕೆಗೆ ಬಹಳ ದಾಹವಾಗಿದೆಯಂತೆ.



ಕೂಡಲೇ ಮಧುವನ್ನು ಕೊಡಿಸಿರಿ. ನಾನು ಬೇಗನೇ ಹೋಗಬೇಕು" ಎಂದಳು ದ್ರೌಪದಿ. "ಅದನ್ನು ಇನ್ನೊಬ್ಬಳ ಕೈಯಲ್ಲಿ ಕಳುಹಿಸುತ್ತೇನೆ" ಎನ್ನುತ್ತಾ ಕೀಚಕನು ಅವಳ ಕೈಯನ್ನು ಹಿಡಿದನು.

ದ್ರೌಪದಿ ಗಾಬರಿಯಾಗಿ ಅವನನ್ನು ಪಕ್ಕನೆ ದೂಡಿ ಬೀಳುವಂತೆ ಮಾಡಿ, ಓಡುತ್ತಾ ವಿರಾಟರಾಜನ ಸಭೆಯೊಳಗೆ ಪ್ರವೇಶಮಾಡಿದಳು. ಕೀಚಕನು ಕೂಡಾ ಅವಳ ಹಿಂದೆಯೇ ಬಂದು, ವಿರಾಟರಾಜನ ಇದಿರಲ್ಲೇ ಅವಳ ಜುಟ್ಟು ಹಿಡಿದು ನಿಲ್ಲಿಸಿದನು.

ಈ ದುಷ್ಟತನವನ್ನು ಆ ಸಭೆಯಲ್ಲಿದ್ದ ಧರ್ಮರಾಜನೂ ಭೀಮನೂ ನೋಡಿದರು. ಕೀಚಕನ ಅತ್ಯಾಚಾರವನ್ನು ಕಣ್ಣಾರೆಕಂಡ ಭೀಮನು ಹಲ್ಲುಗಳನ್ನು ಪಟಪಟನೆ ಕಡಿದನು. ಅವನ ಶರೀರವೆಲ್ಲ ಬೆವರಿನಿಂದ ತುಂಬಿತು. ಕಣ್ಣುಗಳಿಂದ ಕಿಡಿಗಳುದುರ ತೊಡಗಿದುವು. ಇದಿರಿನಲ್ಲಿದ್ದ ಒಂದು ಹೆಮ್ಮರವನ್ನು ಕೀಳುವ ಉದ್ದೇಶದಿಂದ ಎದ್ದನು.

ಆಗ ಧರ್ಮರಾಜನು ಭೀಮನ ಕಾಲಿನ ಹೆಬ್ಬೆರಳನ್ನು. ತನ್ನ ಹೆಬ್ಬೆರಳಿನಿಂದ ಒತ್ತಿ. "ಏನಪ್ಪಾ, ಕಟ್ಟಿಗೆಗಾಗಿ ಈ ಮರವನ್ನು ಮುರಿದು ಹಾಕಿಬಿಡಬೇಡ. ಆಚೆಯಲ್ಲಿ ಇನ್ನೂ ಅನೇಕ ಮರಗಳಿವೆ. ಅವುಗಳನ್ನು ಬೇಕಾದರೆ ಕೀಳು" ಎಂದನು.

ಇಷ್ಟರಲ್ಲಿ ದ್ರೌಪದಿ ತನ್ನ ಗಂಡಂದಿರ ಅಶಕ್ತತೆಯನ್ನು ಗ್ರಹಿಸಿ, ಚುರಚುರನೆ ನೋಡುತ್ತ, ವಿರಾಟರಾಜನನ್ನು ಕುರಿತು. "ಈ ನೀಚನು ನನ್ನನ್ನು ಹೀಗೆ ಅವಮಾನಗೊಳಿಸುತ್ತಿರುವಾಗ. ಮಹಾ ಬಲಶಾಲಿಗಳಾದ ನನ್ನ ಗಂಡಂದಿರಾದ ಗಂಧರ್ವರು ಕಾಲ್ಕಟ್ಟುಬಿದ್ದು ನನ್ನನ್ನು ಕಾಪಾಡಲಾರದ ಸ್ಥಿತಿಯಲ್ಲಿದ್ದಾರೆ. ಹಾಗಿರುವಾಗ ರಾಜನಾದ ನೀನಾದರೂ ರಕ್ಷಿಸುವಿಯೆಂದು ಬಂದರೆ. ಈ ಬಗೆಯ ಮಾನಭಂಗವನ್ನು ನೋಡುತ್ತಿದ್ದರೂ ಉಪೇಕ್ಷೆಯಿಂದಿರುವೆಯಲ್ಲಾ!" ಎಂದು ಸಭೆಯವರನ್ನು ನೋಡಿ. "ರಾಜನಿಗೂ, ಕೀಚಕನ ಹಾಗೆಯೇ ನಿಮಗೂ ಸಹಾ ಧರ್ಮ ನ್ಯಾಯಗಳೊಂದೂ ಗೊತ್ತಿಲ್ಲವೆಂದು ಕಾಣುತ್ತದೆ" ಎಂದಳು.

ಅವಳ ಮಾತನ್ನು ಕೇಳಿ ವಿರಾಟರಾಜನು. "ಏನಮ್ಮಾ. ನಿಮ್ಮಿಬ್ಬರೊಳಗೆ ನಮಗೆ ತಿಳಿಯದಂತೆ ಏನು ತಗಾದೆಯೋ ನಾವೇನು ಬಲ್ಲೆವು? ನಿಜಸಂಗತಿ ತಿಳಿಯದಿರುವಾಗ ನಾನು ಹೇಗೆ ಧರ್ಮವನ್ನು ನಿರ್ಣಯ ಮಾಡಲಾದೀತು?" ಎಂದು ದ್ರೌಪದಿಗೆ ಉತ್ತರವಿತ್ತನು.

ಆಗ ಧರ್ಮರಾಜನು ದ್ರೌಪದಿಯನ್ನು ನೋಡಿ. "ಎಲೇ, ಸೈರಂಧ್ರೀ, ನೀನು ಇಲ್ಲಿ ಯಾರನ್ನೂ ತೊಂದರೆಗೊಳಿಸದೆ ಅಂತಃಪುರಕ್ಕೆ ಹೋಗಿಬಿಡು. ನಿನ್ನ ಗಂಡಂದಿರು ಏನೂ ಮಾಡಲಾರದೆ ಸುಮ್ಮನಿರುವುದಾದರೆ ಅದಕ್ಕೇನೋ ಮುಖ್ಯಕಾರಣ ವಿರಬೇಕು. ದೇಶಕಾಲಗಳನ್ನು ಆಲೋಚನೆ ಮಾಡದೆ ನೀನು ಇಲ್ಲಿ ನಿಂತು ಅಳುತ್ತ ಸಭೆಯಲ್ಲಿರುವವರನ್ನು

ಏಕೆ ಗಲಿಬಿಲಿಗೊಳಿಸುವೆ? ನಿನಗೆ ಅಪಕಾರ ಮಾಡಿದವರನ್ನು ನಿನ್ನ ಗಂಡಂದಿರೇ ದಂಡಿಸದೆ ಬಿಡಲಾರರು. ನಂಬು" ಎಂದನು.

ದ್ರೌಪದಿ ತಲೆ ತಗ್ಗಿಸಿಕೊಂಡು ನೆಟ್ಟಗೆ ಸುಧೇಷ್ಣೆಯ ಮಂದಿರಕ್ಕೆ ಹೋದಳು. ಅವಳು ಜುಟ್ಟು ಬಿಚ್ಚಿಕೊಂಡು ಶೋಕವೇ ಮೂರ್ತಿಮಂತಳಾದವಳಂತೆ ಕುಳಿತುಬಿಟ್ಟಳು. ಅವಳ ಅವತಾರವನ್ನು ನೋಡಿ ಸುಧೇಷ್ಣೆ, "ಏನಿದು ಮಾಲಿನೀ, ಯಾರು ನಿನಗೆ ಕಷ್ಟವನ್ನು ಕೊಟ್ಟರು?" ಎಂದು ಕೇಳಿದಳು.

"ನೀನು ಮಧುವನ್ನು ತರಲು ನನ್ನನ್ನು ಕಳುಹಿಸಿದಾಗ, ದುರಾತ್ಮನಾದ ಕೀಚಕನು ನನ್ನನ್ನು ಕಾಡಿಸಿ ತುಂಬಿದ ಸಭೆಯಲ್ಲಿ ಅವಮಾನಗೊಳಿಸಿದನು. ನನಗೆ ಹೀಗೆ ಮಾಡಿದುದರಿಂದ ಯಾರಿಗೆ ರೋಷ ಬರುತ್ತದೋ ಅವರೇ ಅವನನ್ನು ದಂಡಿಸುತ್ತಾರೆ, ನೋಡುತ್ತಿರು" ಎಂದಳು ದ್ರೌಪದಿ.

ದ್ರೌಪದಿ ನಿಜವಾಗಿಯೂ ಕೀಚಕನನ್ನು ಕೊಲ್ಲಿಸಬೇಕೆಂದೇ ನಿಶ್ಚಯಿಸಿಕೊಂಡಿದ್ದಳು. ಅವಳು ತನ್ನ ಬಿಡದಿಗೆ ಹೋಗಿ ಸ್ನಾನಮಾಡಿ, ಬಟ್ಟೆಗಳನ್ನು ಒಗೆದುಕೊಂಡು ದುಗುಡದಿಂದಲೇ ಹಗಲನ್ನು ಕಳೆದಳು. ಆಮೇಲೆ ರಾತ್ರಿ ಬಹಳ ಹೊತ್ತಿನ ಮೇಲೆ ಅವಳು ಭೀಮನಿರುವ ಜಾಗಕ್ಕೆ ಹೋದಳು. ಭೀಮನು ಭುಸುಗುಡುತ್ತ ಗಾಢನಿದ್ರೆಯಲ್ಲಿದ್ದನು. ದ್ರೌಪದಿ ಅವನ ಬಳಿ ಕುಳಿತು ಕಣ್ಣೀರಿಳಿಸಿ ಅಳುತ್ತ, ಭೀಮನನ್ನು ಆಲಿಂಗಿಸಿ, "ಏಳಯ್ಯಾ, ಹೀಗೆ ಸತ್ತುಹೋದವನ ಹಾಗೆ ಚಲನವಿಲ್ಲದೆ ನಿದ್ದೆ ಮಾಡಿಕೊಂಡಿರುವೆಯಲ್ಲ? ಬದುಕಿರುವವನು ತನ್ನ ಹೆಂಡತಿಯನ್ನು ಯಾವನಾದರೂ ಹೀಗೆ ಮಾಡಿದರೆ ಸುಮ್ಮನಿರುವನೆ? ಏಳೇಳು!" ಎಂದಳು.

ಭೀಮನೂ ಎಚ್ಚೆತ್ತು, ಹಾಸಿಗೆಯ ಮೇಲಿನಿಂದೆದ್ದು "ಏಕೆ ಹೀಗೆ ಬಾಡಿ ಬತ್ತಿ ದುಃಖಿಸುತ್ತಿರುವಿ? ಇಲ್ಲಿಗೇಕೆ ಬಂದೆ? ನನ್ನಿಂದಾಗಬೇಕಾದ ಕಾರ್ಯವೇನಾ



ದರೂ ಇದ್ದರೆ ಹೇಳಿ, ಯಾರಿಗೂ ಗೊತ್ತಾಗದಂತೆ ಹೋಗಿ ಮಲಗಿಕೋ" ಎಂದನು.

"ಎಲ್ಲವನ್ನೂ ತಿಳಿದುಕೊಂಡ ಮೇಲೆ ಹೀಗೆ ಹೇಳುವಿಯಾ? ನಿಮ್ಮ ಅಣ್ಣ ಜೂಜುಖೋರನಾದುದರಿಂದಲೇ ನನಗೆ ಇಂಥಾ ಹಾಳು ಗತಿ ಬಂತು. ಎಷ್ಟೆಲ್ಲ ಕಷ್ಟಗಳು? ನಾನು ಈ ವಿರಾಟನ ಹೆಂಡತಿಯ ಹತ್ತಿರ ಸೇವೆ ಮಾಡಿಕೊಂಡಿರುವುದು ಸಾಲದೆ, ಹಾಳಾದ ಕೀಚಕನೊಬ್ಬ ನನ್ನ ಬೆನ್ನಿಗೆ ಬಿದ್ದು ಸಹಿಸಲಾಗದಂಥ ಅವಮಾನ ಮಾಡಿಬಿಟ್ಟ. ಇನ್ನು ಆ ವಿರಾಟರಾಜ ಏನು ಹೇಳುವನೋ ಎಂಬ ಭಯವೂ ನನಗೆ ಬಂದಿದೆ. ಚಾಕರಿ ಮಾಡಿ ಮಾಡಿ ನನ್ನ ಕೈಗಳು ಹೇಗೆ ಬರಡುಗಟ್ಟಿದುವೋ ನೋಡು." ಎನ್ನುತ್ತಾ ದ್ರೌಪದಿ ಭೀಮನಿಗೆ ತನ್ನ ಕೈಗಳನ್ನು ತೋರಿಸಿದಳು.

ಭೀಮನು ಅವಳೊಂದಿಗೆ, "ಆ ಕೀಚಕ ರಾಜಸಭೆಯಲ್ಲಿ ನಿನ್ನನ್ನು ಕಾಲೆತ್ತಿ ತುಳಿದಾಗ ಅಲ್ಲಿಯೇ ಅವನನ್ನು ಕೊಂದುಬಿಡಲು ನೋಡಿದೆ. ಆದರೆ

ಧರ್ಮರಾಜಣ್ಣ ನಿವಾರಿಸಿಬಿಟ್ಟ. ಅಸಲು ಆ ದಿನವೇ ದುರ್ಯೋಧನ, ಕರ್ಣ, ಶಕುನಿಗಳ ತಲೆಗಳನ್ನು ಒಡೆದುಹಾಕದೆ ಹೋದೆನಲ್ಲ ಎಂಬ ವಿಚಾರ ನನ್ನನ್ನು ಯಾವಾಗಲೂ ಬಾಧಿಸಿಕೊಂಡೇ ಇದೆ. ಹೇಗೂ ಇಷ್ಟು ದಿನ ಹೋಯಿತು. ಇನ್ನು ಕೆಲವೇ ದಿನ ಸಹಿಸಿಕೊಂಡಿರು" ಎಂದನು.

"ಈ ದಿನ ನಡೆದ ಅವಮಾನವನ್ನು ಸಹಿಸಿಕೊಂಡಿರಲಾರೆನು. ಹರಟೆಗಳೆಲ್ಲ ಈಗ ಬೇಡ. ಈ ದಿನ ನಡೆದುದಕ್ಕೆ ಪ್ರತೀಕಾರವೇನೆಂದು ಆಲೋಚಿಸಿಯೇ ಹೇಳು. ಸುಧೇಷ್ಣೆಗಿಂತಲೂ ನಾನು ಚೆನ್ನಾಗಿದ್ದೇನೆಂದುಕೊಂಡು ವಿರಾಟನು ನನ್ನನ್ನು ಬಲೆಯಲ್ಲಿ ಹಾಕಿಕೊಳ್ಳಲು ನೋಡಿದ. ಅದನ್ನು ತಿಳಿದು ಕೀಚಕ ನನ್ನ ಬೆನ್ನು ಬಿದ್ದ. ನನಗೆ ಐದು ಮಂದಿ ಗಂಧರ್ವರು ಗಂಡಂದಿರಾಗಿರುವರೆಂದೂ ಅವರು ನಿನ್ನ ಪ್ರಾಣ ತೆಗೆಯುವರೆಂದೂ ಒಳ್ಳೆಯ ಮಾತಿನಲ್ಲಿ ಹೇಳಿ ನೋಡಿದೆ. ಆದರೆ ಆ ಮೂರ್ಖ ನನ್ನ ಮಾತನ್ನು ಲಕ್ಷ್ಯಮಾಡಲಿಲ್ಲ. ಸುಧೇಷ್ಣೆ ಅವನಿಗೆ ಸಹಾಯಕಳಾಗಿ ನನ್ನನ್ನು ಮಧು ತರಲಿಕ್ಕಾಗಿ ಅವನ ಮನೆಗೆ ಕಳಿಸಿದಳು. ಅವನು ನನ್ನ ಮೇಲೆಬೀಳಲು ಬಂದ. ನಾನು ಓಡಿಬಂದು ರಾಜಭವನದೊಳಗೆ ಹೊಕ್ಕೆ. ಎಲ್ಲರೂ ನೋಡುತ್ತಿರುವಾಗ ಆ ದುರಾತ್ಮದವನು ನನ್ನನ್ನು ಕಾಲಿನಿಂದ ಒದೆದ. ಈ ಮಹಾದುಷ್ಟನನ್ನು ನೀನು ಗಡಿಗೆ ಒಡೆದ ಹಾಗೆ ಪುಡಿಪುಡಿ ಮಾಡದೆಹೋದರೆ ನಾನು ವಿಷಕುಡಿದು ಸಾಯುತ್ತೇನೆ." ಎನ್ನುತ್ತಾ ದ್ರೌಪದಿ ಭೀಮನನ್ನು ಗಟ್ಟಿಯಾಗಿ ಆಲಿಂಗಿಸಿಕೊಂಡು ಗಳಗಳನೆ ಅತ್ತಳು.

ಭೀಮನು ಅವಳನ್ನು ಗಟ್ಟಿಯಾಗಿ ಹಿಡಿದುಕೊಂಡು, ಕಣ್ಣೀರು ಒರೆಸಿ, ಸಮಾಧಾನಪಡಿಸಿ "ಆಗಲಿ. ನೀನು ಹೇಳಿದಂತೆಯೇ ಅವನನ್ನು ಕೊಂದುಬಿಡುತ್ತೇನೆ. ಅದಕ್ಕಾಗಿ ನೀನು ಒಂದು ಕೆಲಸ ಮಾಡಬೇಕು. ಹೀಗೆ ಅಳುಮೋರೆಯಿಂದಿರುವುದನ್ನು ಬಿಟ್ಟು, ಅರಳಿದ ಮುಖದೊಂದಿಗೆ, ನಗುತ್ತ ಸಂತೋಷ ಪಡಿಸುವವಳಂತೆ ಆ ಕೀಚಕನನ್ನು ಸಂಧಿಸಿ, ಅವನ ಕೋರಿಕೆ ತೀರಿಸುವವಳ ಹಾಗೆ ಅಭಿನಯ ಮಾಡು. ನರ್ತನ ಶಾಲೆಯಲ್ಲಿ ಹಗಲು ವೇಳೆ ಸ್ತ್ರೀಯರು ನಾಟ್ಯವಾಡಿಕೊಂಡಿರುತ್ತಾರೆ; ಹಾಡುಗೀಡು ಕಲಿಯುತ್ತಾರೆ. ರಾತ್ರಿಯ ಹೊತ್ತಿನಲ್ಲಿ ಅಲ್ಲಿ ಯಾರೂ ಇರುವುದಿಲ್ಲ. ಅಲ್ಲಿ ಒಂದು ಮಂಚ ಕೂಡಾ ಇದೆ. ರಾತ್ರಿಯಲ್ಲಿ ಅವನನ್ನು ಅಲ್ಲಿಗೆ ಬರುವಂತೆ ಹೇಳು. ಮೂರನೆಯ ಕಣ್ಣಿನವನಿಗೆ ತಿಳಿಯದಂತೆ, ಅಲ್ಲಿ ಕೀಚಕನನ್ನು ಅವನ ತಾತಮುತ್ತಾತರ ಬಳಿಗೆ ಕಳಿಸಿ ಬಿಡುತ್ತೇನೆ. ಇನ್ನೇನೂ ಸಂದೇಹ ಪಡಬೇಡ" ಎಂದನು.

ಹೀಗೆ ಮಂತ್ರಾಲೋಚನೆಯಿಂದ ದ್ರೌಪದಿಯೂ ಭೀಮನೂ ಆ ರಾತ್ರಿಯನ್ನು ಕಳೆದರು.





# ಶಿವಪುರಾಣ

## ೧೬

ಬ್ರಹ್ಮನು ತಾರಕಾಸುರನ ಕುಮಾರರು ಮಾಡುವ ತಪಸ್ಸಿಗೆ ಮೆಚ್ಚಿ ಅವರ ಮುಂದೆ ಪ್ರತ್ಯಕ್ಷನಾಗಿ, "ತಪಸ್ಸು ಮಾಡುವುದನ್ನು ಸಾಕುಮಾಡಿರಿ. ನನಗೆ ಬಹಳ ಸಂತೋಷವಾಗಿದೆ. ನಿಮಗೆ ಏನು ವರಗಳು ಬೇಕು ?" ಎಂದು ಕೇಳಿದನು.

"ದೇವಾ, ರಥವಲ್ಲದ ರಥದ ಮೇಲೆ, ಬಿಲ್ಲಲ್ಲದ ಬಿಲ್ಲಿಗೆ, ಬಾಣವಲ್ಲದ ಬಾಣವನ್ನು ಸಂಧಿಸಿ ಹೊಡೆದರೆ ಹೊರತು ನಮಗೆ ಸಾವು ಬಾರದಂತೆ ವರ ಕೊಟ್ಟು ಅನುಗ್ರಹಿಸಬೇಕು. ನಮಗೆ ಸಕಲ ವಿದ್ಯೆಗಳು, ತೇಜಸ್ಸು, ಬಲ, ಐಶ್ವರ್ಯ, ತ್ಯಾಗ, ಭೋಗ ಭಾಗ್ಯ, ಶಿವಭಕ್ತಿ, ಇವುಗಳೊಂದಿಗೆ ಚಿನ್ನ, ಬೆಳ್ಳಿ, ಕಬ್ಬಿಣಗಳಿಂದಾದ ಪುರಗಳು ನಮ್ಮ ನಿವಾಸಕ್ಕಾಗಿ ಬೇಕು." ಎಂದು ಮೂವರು ಕುಮಾರರೂ ಬ್ರಹ್ಮನೊಂದಿಗೆ ವರ ಕೇಳಿದರು.

ಬ್ರಹ್ಮನು ಅವರು ಕೋರಿದಂತಹ ವರಗಳನ್ನು ಕೊಟ್ಟು, ಅವರಿಗೆ ಬೇಕಾದ ಮೂರು ಪುರಗಳನ್ನು ನಿರ್ಮಿಸಲು ದೇವಶಿಲ್ಪಿಯಾದ ವಿಶ್ವಕರ್ಮನಿಗೆ ಹೇಳಿ ಅಂತರ್ಧಾನನಾದನು.

ವಿಶ್ವಕರ್ಮನು ಚಿನ್ನದಿಂದಲೂ, ಬೆಳ್ಳಿಯಿಂದಲೂ, ಕಬ್ಬಿಣದಿಂದಲೂ ಮೂರು ಮಹಾಪುರಗಳನ್ನು ನಿರ್ಮಾಣಮಾಡಿ ತಾರಕನ ಕುಮಾರರಿಗೆ ಒಪ್ಪಿಸಿದನು. ಅವುಗಳು ತ್ರಿಪುರಗಳೆಂದು ಪ್ರಸಿದ್ಧವಾದುವು. ಈ ತ್ರಿಪುರಗಳಿಗೆ ಕಾಮಗಮನವಿದ್ದಿತು. ಅವುಗಳು ಆಕಾಶದಲ್ಲಿ ನಿಂತಿರುವುವು. ಅವುಗಳಲ್ಲಿ ಮನೆಗಳೂ, ಮಠಗಳೂ, ಕೆರೆಗಳೂ, ಧನಧಾನ್ಯಗಳೂ ಸಮೃದ್ಧಿಯಾಗಿದ್ದುವು.

ಯಾವ ಕಾಲದಲ್ಲಿಯೂ ಅವುಗಳಲ್ಲಿ ಯಾವುದರ ಕೊರತೆಯೂ ಬರುತ್ತಿರಲಿಲ್ಲ. ಚಿನ್ನದಿಂದಾದ ಪುರದಲ್ಲಿ ತಾರಕಾಕ್ಷನೂ, ಬೆಳ್ಳಿಯ ಪುರದಲ್ಲಿ ಕಮಲಾಕ್ಷನೂ, ಕಬ್ಬಿಣದ ಪುರದಲ್ಲಿ ವಿದ್ಯುನ್ಮಾಲಿಯೂ ನಿವಾಸಗಳನ್ನು ಏರ್ಪಡಿಸಿಕೊಂಡು ಅವುಗಳಿಂದ ಮೂರು ಲೋಕಗಳಲ್ಲಿಯೂ ಸ್ವೇಚ್ಛೆಯಿಂದ ತಿರುಗತೊಡಗಿದರು. ಈ ತ್ರಿಪುರಾಧೀಶರಿಂದಾಗಿ ಎಲ್ಲಾ ಲೋಕದವರಿಗೂ ಕಷ್ಟಗಳೇ ಬರತೊಡಗಿದುವು.

ಈ ತ್ರಿಪುರಗಳನ್ನು ಜಯಿಸಲು ಇಂದ್ರನೇ ಮೊದಲಾದ ದೇವತೆಗಳಿಗೆ ಸಾಧ್ಯವೆನಿಸಲಿಲ್ಲ. ಕಡೆಗೆ ಅವ

ಹಿಂಬದಿಯ ಚಿತ್ರ ಕಥೆ



ರೆಲ್ಲ ಬ್ರಹ್ಮನ ಬಳಿಗೆ ಹೋಗಿ, "ತ್ರಿಪುರಾಸುರರು ನಮ್ಮನ್ನು ಬಹಳ ಬಾಧೆ ಪಡಿಸುತ್ತಿದ್ದಾರೆ. ಅವರ ನಗರಗಳು ನಮ್ಮ ಮನೆ ಮಂದಿರಗಳ ಮೇಲೆ ಎರಗಿ ಎಲ್ಲವನ್ನೂ ನೆಲಸಮ ಮಾಡುತ್ತಿವೆ. ಎಲ್ಲರೂ ಭೀತಿಯಿಂದ ತತ್ತರಿಸುತ್ತಿದ್ದಾರೆ. ಇದನ್ನು ನಿವಾರಿಸಿ ನಮ್ಮನ್ನು ಕಾಪಾಡಬೇಕು" ಎಂದು ಮೊರೆಯಿಟ್ಟರು.

"ತ್ರಿಪುರಾಸುರರು ಸುಲಭವಾಗಿ ಸಾಯುವವರಲ್ಲ. ನಾವು ಶಿವನ ಆಲೋಚನೆಯನ್ನು ಕೇಳೋಣ, ನಡೆಯಿರಿ" ಎಂದು ಬ್ರಹ್ಮದೇವನು ದೇವತೆಗಳನ್ನೆಲ್ಲ ಕರೆದುಕೊಂಡು ಶಿವನ ಬಳಿಗೆ ಹೋದನು.

ಶಿವನು ಅವರು ಬಂದ ಕಾರ್ಯವನ್ನು ತಿಳಿದುಕೊಂಡ ಮೇಲೆ, "ಆ ತ್ರಿಪುರಾಸುರರನ್ನು ನಾನು ಕೊಲ್ಲಲಾರೆ. ಬೇಕಾದರೆ ನನ್ನ ತೇಜಸ್ಸಿನಲ್ಲಿ ಅರ್ಧವನ್ನು ಕೊಡುತ್ತೇನೆ. ನೀವೇ ಅವರನ್ನು ಹೇಗಾದರೂ ಕೊಲ್ಲಿರಿ." ಎಂದನು.

ತ್ರಿಪುರಾಸುರರಿಗೆ ತಾನು ಕೊಟ್ಟ ವರಗಳನ್ನೆಲ್ಲ ಬ್ರಹ್ಮನು ಶಿವನಿಗೆ ಹೇಳಿ, "ನನ್ನ ತೇಜಸ್ಸನ್ನು ಕೂಡಾ ನೀನೇ ತೆಗೆದುಕೊಂಡು, ಅವರನ್ನು ಕೊಲ್ಲಬೇಕು" ಎಂದನು. ರಥವಲ್ಲದ ರಥವೂ, ಬಿಲ್ಲಲ್ಲದ ಬಿಲ್ಲೂ, ಬಾಣವಲ್ಲದ ಬಾಣವೂ ಬೇಕಾಗಿವೆ. ಆದುದರಿಂದ ಶಿವನು ಭೂಮಿಯನ್ನು ರಥವನ್ನಾಗಿಯೂ ವೇದಗಳನ್ನು ರಥದ ಕುದುರೆಗಳನ್ನಾಗಿಯೂ, ಸೂರ್ಯಚಂದ್ರರನ್ನು ರಥದ ಚಕ್ರಗಳನ್ನಾಗಿಯೂ, ಮೇರುಪರ್ವತವನ್ನು ಬಿಲ್ಲಾಗಿಯೂ, ಆದಿಶೇಷನನ್ನು ನಾಣಾಗಿಯೂ ಮಾಡಿಕೊಂಡು, ವಿಷ್ಣುಮೂರ್ತಿಯನ್ನು ನಾರಾಯಣಾಸ್ತ್ರವನ್ನಾಗಿ ಉಪಯೋಗಿಸಿ ತ್ರಿಪುರಗಳನ್ನು ಹೊಡೆದನು. ಆ ಏಟಿಗೆ ಮೂರು ಪುರಗಳೂ ಬೂದಿಯಾಗಿ ಭೂಮಿಯ ಮೇಲೆ ಉದುರಿಹೋದುವು. ಶಿವನಿಗೆ ತ್ರಿಪುರಾಂತಕನೆಂಬ ಹೆಸರು ಬಂದಿತು.

ಹೀಗೆ ತ್ರಿಪುರಾಸುರರು ನಾಶವಾಗಿ ಹೋದಮೇಲೆ ಜಲಂಧರನೆಂಬ ಮತ್ತೊಬ್ಬ ರಾಕ್ಷಸನು ತಲೆಯೆತ್ತಿ ವಿಜೃಂಭಿಸುತ್ತ ಲೋಕಗಳನ್ನು ಬಾಧಿಸಲು ತೊಡಗಿದನು. ಈ ಜಲಂಧರನ ನಿಜವಾದ ಹೆಸರು ಸೂಕರ. ಅವನು ಹಿರಣ್ಯಕಶಿಪುವಿನ ಹತ್ತನೆಯ ಮಗನಾದ ಅಗ್ನಿಜಿಹ್ವನ ಕುಮಾರ. ಅವನು ಬ್ರಹ್ಮನನ್ನು ಕುರಿತು ಬಹುಘೋರವಾದ ತಪಸ್ಸನ್ನು ಮಾಡಿ, ದೇವಗಣಗಳಿಂದಾಗಲಿ, ರಾಕ್ಷಸಗಣಗಳಿಂದಾಗಲಿ, ನಾಗರು, ಮಾನವರು ಮೊದಲಾದ ಯಾರಿಂದಲೂ ತನಗೆ ಸಾವು ಬಾರದಂತೆಯೂ, ನೀರೊಳಗೇ ನಿವಾಸವನ್ನೇರ್ಪಡಿಸಿಕೊಂಡಿರುವಂತೆಯೂ ವರಗಳನ್ನು ಪಡೆದಿದ್ದನು. ಈ ಬಗೆಯ ವರ ಬಲಗಳಿಂದ ಅವನು ಎಂಟು ದಿಕ್ಕುಗಳನ್ನು ಗೆದ್ದು ದೇವೇಂದ್ರನೇ ಮೊದಲಾದವರನ್ನು ಸ್ವರ್ಗದಿಂದ ಓಡಿಸಿ, ಅಲ್ಲೇ ಇದ್ದುಕೊಂಡು ಮೂರು ಲೋಕಗಳನ್ನೂ ಆಳ ತೊಡಗಿದನು. ಈ ಜಲಂಧರಾಸುರನ ಪ್ರತಾಪಕ್ಕೆ ಹೆದರಿ

ಕೈಲಾಸದಿಂದ ಶಿವನೂ, ವೈಕುಂಠದಿಂದ ವಿಷ್ಣುವೂ ಓಡಿಹೋಗಿ, ಅವರಿಬ್ಬರೂ ಮಾನಸಸರೋವರದೊಳಗೆ ಅಡಗಿಕೊಂಡರು. ಅಲ್ಲಿ ಇಬ್ಬರೂ ತಮ್ಮೊಳಗೆ ಗುಟ್ಟು ಮಾತಾಡಿಕೊಂಡು, ಪರಬ್ರಹ್ಮನನ್ನು ಕುರಿತು ತಪಸ್ಸು ಮಾಡಿದರು. ಪರಬ್ರಹ್ಮ ಸ್ವರೂಪನು ಅವರ ಮುಂದೆ ಪ್ರತ್ಯಕ್ಷನಾಗಿ ವಿಷ್ಣುವಿಗೆ ಚಕ್ರವನ್ನೂ, ಶಿವನಿಗೆ ತ್ರಿಶೂಲವನ್ನೂ ಕೊಟ್ಟು "ನೀವು ಒಬ್ಬರ ಆಯುಧವನ್ನು ಮತ್ತೊಬ್ಬರು ಪಡೆದು ಕೊಂಡು ಜಲಂಧರನನ್ನು ಕೊಂದುಬಿಡಬಲ್ಲಿರಿ" ಎಂದು ಹೇಳಿ ಅದೃಶ್ಯನಾದನು.

ಶಿವನೂ ವಿಷ್ಣುವೂ ಸಂತೋಷಪಟ್ಟು, ತಮ್ಮ ಆಯುಧಗಳನ್ನು ಬದಲಾಯಿಸಿಕೊಂಡು ಜಲಂಧರನನ್ನು ಹೊಂಚುಕಾಯ ತೊಡಗಿದರು.

ಆಗ ಈ ಸಂಗತಿಯನ್ನು ತಿಳಿದುಕೊಂಡ ನಾರದನು ಜಲಂಧರನ ಬಳಿಗೆ ಹೋಗಿ, "ಜಲಂಧರಾ, ಶಿವನೂ, ವಿಷ್ಣುವೂ ಮಾನಸಸರೋವರದಲ್ಲಿ ಅಡಗಿಕುಳಿತಿದ್ದಾರೆ" ಎಂದು ಹೇಳಿದನು.

ಜಲಂಧರನು ಕೂಡಲೇ ಮಾನಸಸರೋವರಕ್ಕೆ ಹೋಗಿ ನೀರಿನಲ್ಲಿ ಮುಳುಗಿ ಶಿವವಿಷ್ಣುಗಳನ್ನು ಹುಡುಕ ತೊಡಗಿದನು. ಈ ಸಂಗತಿಯನ್ನು ತಿಳಿದು ಶಿವನೂ ವಿಷ್ಣುವೂ ತೀರಕ್ಕೆ ಬಂದು ಜಲಂಧರನು ಮೇಲೇಳುವುದನ್ನೇ ಕಾದಿದ್ದರು. ಶಿವನ ಕೈಯಲ್ಲಿ ವಿಷ್ಣುವಿನ ಚಕ್ರವೂ ವಿಷ್ಣುವಿನ ಕೈಯಲ್ಲಿ ಶಿವನ ಶೂಲವೂ ಸಿದ್ಧವಾಗಿದ್ದುವು.

ಮಾನಸಸರೋವರದೊಳಗೆಲ್ಲಾ ತಡಕಾಡಿದ ಮೇಲೆ, ಶಿವ ವಿಷ್ಣುಗಳನ್ನು ಕಾಣದೆ ಬೇಸರದಿಂದ ಜಲಂಧರನು ತೀರಕ್ಕೆ ಬಂದು ಮೇಲೆದ್ದನು. ಕೂಡಲೇ ಅವನಿಗೆ ತನಗೆ ಬೇಕಾದವರಿಬ್ಬರೂ ಕಾಣಿಸಿದರು. ಅವನು ಸಂತೋಷದಿಂದ ಅವರೊಡನೆ ಯುದ್ಧಕ್ಕೆ ಕಲೆಬಿದ್ದನು. ಅವರಿಬ್ಬರೂ ಅವನನ್ನು ಎರಡು ಖಂಡಗಳನ್ನಾಗಿ ಮಾಡಿ ಕೊಂದುಬಿಟ್ಟರು. ಯಾರಿಂದಲೂ ಸಾಯಲಾಗದಂತಹ ವರವನ್ನು ಪಡೆದ ಜಲಂಧರನು ಸತ್ತುಹೋದುದನ್ನು ನೋಡಿ ಮೂರು ಲೋಕಗಳೂ ಸಂತೋಷದಿಂದ ನಲಿದುವು.



ಕಶ್ಯಪ ಪ್ರಜಾಪತಿಯ ಮಗಂದಿರಲ್ಲಿ ವಿಪ್ರಜಿತ್ತು ಎಂಬ ದಾನವನೊಬ್ಬನಿದ್ದನು. ಆ ವಿಪ್ರಜಿತ್ತುವಿಗೆ ದಂಭನೆಂಬ ಮಗನಿದ್ದ. ದಂಭನು ವಿಷ್ಣುವಿನ ಪರಮ ಭಕ್ತ. ಯಾವಾಗಲೂ ವಿಷ್ಣು ಪೂಜೆ ಮಾಡುವುದೇ ಅವನ ಕೆಲಸ. ಆದರೆ ಈ ದಂಭನಿಗೆ ಬಹಳ ಕಾಲ ಮಕ್ಕಳಿಲ್ಲದೆ ಹೋಗಿತ್ತು. ಆದುದರಿಂದ ಅವನು ಬದರಿಕಾಶ್ರಮಕ್ಕೆ ಹೋಗಿ ವಿಷ್ಣುವನ್ನು ಕುರಿತು ದೀರ್ಘಕಾಲದವರೆಗೆ ಘೋರವಾದ ತಪಸ್ಸನ್ನು ಮಾಡಿದನು. ವಿಷ್ಣು ಪ್ರತ್ಯಕ್ಷನಾಗಿ ಏನು ವರ ಬೇಕೆಂದು ಕೇಳಿದನು.

"ಮಹಾವಿಷ್ಣುವೇ, ಬಲ ಶೌರ್ಯ ಪರಾಕ್ರಮಗಳಲ್ಲಿ ನಿನಗೆ ಸಮಾನನಾಗಿ, ಮೂರು ಲೋಕಗಳನ್ನೂ ಜಯಿಸಬಲ್ಲವನಾಗಿ, ಯಾರಿಗೂ ಸೋಲದವನಾಗಿ, ನಿನ್ನ ಮೇಲೆ ಭಕ್ತಿಯುಳ್ಳವನಾಗಿರುವಂತಹ ಮಗನನ್ನು ನನಗೆ ಕೊಡು" ಎಂದು ದಂಭನು ವಿಷ್ಣುವನ್ನು ಕೇಳಿದನು. ವಿಷ್ಣು ದಂಭನು ಕೋರಿದಂತೆಯೇ ವರವನ್ನು ಕೊಟ್ಟನು. ದಂಭನು ತಪಸ್ಸನ್ನು ಬಿಟ್ಟು ಮನೆಗೆ ಹೋಗಿ ಹೆಂಡತಿಗೆ ಈ ಶುಭ ಸಮಾಚಾರವನ್ನು ಹೇಳಿದನು. ತರುವಾಯ ಸ್ವಲ್ಪ ಕಾಲದ ಮೇಲೆ ದಂಭನ ಹೆಂಡತಿ ಗರ್ಭಿಣಿಯಾಗಿ ಒಳ್ಳೆಯ ಮುಹೂರ್ತದಲ್ಲಿ ಮಗನನ್ನು ಪಡೆದಳು. ಮಗನಿಗೆ ಶಂಖಚೂಡನೆಂದು ಹೆಸರಿಟ್ಟು ತಾಯಿ ತಂದೆಯರು ಅತ್ಯಂತ ಪ್ರೀತಿಯಿಂದ ಬೆಳೆಸಿದರು. ಶಂಖಚೂಡನು ಕಾಲಕ್ರಮದಲ್ಲಿ ಶುಕ್ರಾಚಾರ್ಯರ ಬಳಿಯಲ್ಲಿ ಸಕಲ ವಿದ್ಯೆಗಳನ್ನೂ ಕಲಿತುಕೊಂಡು ದೊಡ್ಡವನಾದನು. ಅನಂತರ ತಂದೆ ತಾಯಿಗಳ ಅನುಮತಿ ಪಡೆದು ವಿಂಧ್ಯಪರ್ವತಕ್ಕೆ ಹೋಗಿ ಅಲ್ಲಿ ಬ್ರಹ್ಮನನ್ನು ಕುರಿತು ಅತಿದೀರ್ಘವಾದ ತಪಸ್ಸನ್ನು ಮಾಡಿದನು. ನಿರಾಹಾರದಿಂದ ಒಂಟಿಗಾಲಿನಲ್ಲಿ ನಿಂತುಕೊಂಡು ಶಂಖಚೂಡನು ಮಾಡುವ ಕಠಿನವಾದ ತಪಸ್ಸಿಗೆ ಬ್ರಹ್ಮನು ಮೆಚ್ಚಿ ಅವನಿದಿರು ಪ್ರತ್ಯಕ್ಷನಾಗಿ, "ಅಪ್ಪಾ, ನಿನಗೆ ಇಷ್ಟವಾದ ವರವನ್ನು ಕೇಳು" ಎಂದನು.

"ದೇವಾ, ನಾನು ದೇವ, ರಾಕ್ಷಸ, ನಾಗ, ಮಾನವ ಗಣಗಳನ್ನು ಜಯಿಸುವಷ್ಟು ಬಲ ಪರಾಕ್ರಮಶಾಲಿಯಾಗಬೇಕು. ಮೂರು ಲೋಕಗಳನ್ನೂ ಜಯಿಸಿ ಪರಿಪಾಲನೆ ಮಾಡಬೇಕು. ಸಕಲ ಭೋಗಗಳನ್ನೂ ಅನುಭವಿಸಬೇಕು. ಇದೇ ನನ್ನ ಕೋರಿಕೆ" ಎಂದು ವರ ಕೇಳಿದ ಶಂಖಚೂಡ.

ಬ್ರಹ್ಮದೇವನು ಅವನು ಕೇಳಿದಂತೆ ವರ ಕೊಡುತ್ತ, "ಅಪ್ಪಾ, ನೀನು ಬದರಿಕಾಶ್ರಮಕ್ಕೆ ಹೋಗು. ಅಲ್ಲಿ ತುಲಸಿ ಎಂಬ ಕನ್ಯೆ ತಪಸ್ಸು ಮಾಡುತ್ತಿರುವುದನ್ನು ನೋಡುವಿ. ನೀನು ಅವಳನ್ನು ಮದುವೆಯಾಗಿ ಸುಖವಾಗಿರು" ಎಂದು ಹೇಳಿ ಅದೃಶ್ಯನಾದನು.



# ೧೨೬. ಕಡವೆಗಳ ಸಾಕುವಿಕೆ

ಸೋವಿಯೆಟ್ ರಷ್ಯದಲ್ಲಿ ಮಾಸ್ಕೋ ನಗರಕ್ಕೆ ಈಶಾನ್ಯದಲ್ಲಿ 'ಕಸ್ತ್ರೋಮ' ಎಂಬ ಪ್ರಾಯೋಗಿಕ ವ್ಯವಸಾಯ ಕ್ಷೇತ್ರದವರು ಕಡವೆಗಳ ಮಂದೆಯನ್ನು ಸಾಕುವರು. ಇಲ್ಲಿ ಕಡವೆಗಳನ್ನು ಪಳಗಿಸಿ, ಅವುಗಳ ಅಭ್ಯಾಸಗಳನ್ನು ಪರಿಶೀಲಿಸುವರು. ಹೆಣ್ಣು ಕಡವೆಗಳನ್ನು ಹಿಂಡಲು ಪಳಗಿಸುವರು. ಕಡವೆಗಳ ಹಾಲಿನಲ್ಲಿ ಕೊಬ್ಬು ಪದಾರ್ಥ ಹಸುವಿನ ಹಾಲಿನ ಮೂರರಷ್ಟು ಹೆಚ್ಚಾಗಿದೆ. ಕಡವೆ ಹಾಲು ಬಹಳ ಗಟ್ಟಿಯಾಗಿರುವು ದಲ್ಲದೆ, ಒಳ್ಳೆಯ ಸುವಾಸನೆಯಿಂದ ಕೂಡಿದೆ. ಈ ಹಾಲನ್ನು ಕಡೆಯದೆಯೇ ಬೆಣ್ಣೆ ತೆಗೆಯಬಹುದು.

ಇಲ್ಲಿ ಬೆಳೆಯುವ ಕಡವೆಗಳು ಕಾಡಿನಲ್ಲಿ ಸ್ವೇಚ್ಛೆಯಾಗಿ ತಿರುಗುತ್ತವೆ. ಅವುಗಳಿಗಾಗಿ ಸಾಧಾರಣ ವಾದ ಕೊಟ್ಟಿಗೆಗಳನ್ನಷ್ಟೇ ಕಟ್ಟಿದ್ದಾರೆ. ಇಲ್ಲಿ ಕಡವೆಗಳು ಒಳ್ಳೆಯ ಅಭಿವೃದ್ಧಿಗೆ ಬಂದು ಸಂಖ್ಯೆಯಲ್ಲಿಯೂ ಬೆಳೆಯುತ್ತಿವೆ. ಪೂರ್ತಿ ಬೆಳೆದ ಕಡವೆಯ ಭಾರ ೪ ಅಥವಾ ೫ ನೂರು ಕಿಲೋಗಳಷ್ಟಿವೆ. ಅವು ಸಹಜವಾಗಿ ಅಡವಿಯಲ್ಲಿ ದೊರಕುವ ಹುಲ್ಲು ಸೊಪ್ಪು ಸೊದೆಗಳನ್ನೇ ತಿಂದು ಬದುಕಬಲ್ಲುವು. ಇಲ್ಲಿ ಸಾಕಲ್ಪಡುವ ಕಡವೆ ಗಳಿಗೆ ಪ್ರತ್ಯೇಕವಾಗಿ ತರಕಾರಿಗಳನ್ನೂ, ಹುಲ್ಲು ಕಡ್ಡಿಗಳನ್ನೂ ಮೇಯಿಸುವರು. ಇವುಗಳಿಂದ ಉತ್ತಮತರದ ಮಾಂಸ, ಹಾಲು, ಕೊಬ್ಬು, ಕೊಂಬು ಚರ್ಮಗಳು ಲಭಿಸುತ್ತವೆ. ಕಡವೆಗಳು ಹೊರೆಯನ್ನೂ ಹೊರುತ್ತವೆ.



Photo by Suraj N. Sharma



ಬಹುಮಾನ
ಪಡೆದ ಶೀರ್ಷಿಕೆ

ಅಷ್ಟು ಮೇಲೇರಿದರೂ

ಕಳುಹಿಸಿದವರು :
ರಾಮಕೃಷ್ಣ ಜಿ. ನಾಯಕ್

Photo by Suraj N. Sharma



ನನಗಿಂತ ಕೆಳಗೇ

C/o ಜಿ. ಆರ್. ನಾಯಕ್
ಶಿರಸಿ, ಉತ್ತರ ಕನ್ನಡ

ಬಹುಮಾನ
ಪಡೆದ ಶೀರ್ಷಿಕೆ

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೦







★ ಮೇಲಿನ ಫೋಟೋಗಳಿಗೆ ಶೀರ್ಷಿಕೆಗಳು ಜೂನ್ ೧೫ ರೊಳಗೆ ತಲಪಬೇಕು.

★ ಶೀರ್ಷಿಕೆಗಳು ಒಂದಕ್ಕೊಂದು ಸರಿಹೊಂದುವಂತಿರಬೇಕು. ಗೆದ್ದ ಶೀರ್ಷಿಕೆಗಳು ಆಗಸ್ಟ್ '೭ರ ಸಂಚಿಕೆಯಲ್ಲಿ ಪ್ರಕಟವಾಗುತ್ತದೆ.

# ಚಂದಮಾಮ

## ಈ ಸಂಚಿಕೆಯಲ್ಲಿರುವ ಕಥೆಗಳು:



ಎರಡನೇ ಹೊದಿಕೆಯ ಚಿತ್ರ:
**ಗಿಡ್ಡ ಬಾತುಗಳು**

ಮೂರನೇ ಹೊದಿಕೆಯ ಚಿತ್ರ:
**ಆಟದ ಕೋತಿಗಳು**


Printed by B. V. REDDI at The Prasad Process Private Ltd., and Published by B. VISWANATHA REDDI for Chandamama Publications, 2 & 3, Arcot Road, Madras-26. Controlling Editor: 'CHAKRAPANI'